

# ಶಿವರಾಮ ಕಾರಂತ ವೇದಿಕೆ (ರಿ.)

'ಆದರ್ಶ', ನಂ. 307, 17ನೇ ಅಡ್ಡರಸ್ತೆ, 2ನೇ ವಿಭಾಗ
ರವೀಂದ್ರನಾಥ ಟಾಗೋರ್‌ನಗರ, ಬೆಂಗಳೂರು - 560 032
ದೂರವಾಣಿ : 23336822 / 9343766994
ಇ-ಮೇಲ್ : pcchadaga@hotmail.com

## ಕಾರ್ಯಕಾರಿ ಮಂಡಳಿ

| | | |
|---|---|---|
| ಅಧ್ಯಕ್ಷರು | : | ಶ್ರೀಮತಿ ಪ್ರೇಮಾಭಟ್ |
| ಉಪಾಧ್ಯಕ್ಷರು | : | ಶ್ರೀಮತಿ ರಾಧಾ ರಾಮಸ್ವಾಮಿ |
| | | ಶ್ರೀ ಎಸ್. ಆರ್. ವಿಜಯಶಂಕರ |
| ಕಾರ್ಯದರ್ಶಿ | : | ಶ್ರೀ ಪಾ. ಚಂದ್ರಶೇಖರ ಚಡಗ |
| ಸಹಕಾರ್ಯದರ್ಶಿ | : | ಡಾ|| ಆರ್.ಆರ್. ಪಾಂಗಾಳ್ |
| ಖಜಾಂಚಿ | : | ಶ್ರೀ ಎ. ವಾಸುದೇವರಾವ್ |

## ಕಾರ್ಯಕಾರಿ ಸಮಿತಿಯ ಸದಸ್ಯರು

ಸರ್ವಶ್ರೀ

1. ಬಿ.ವಿ. ಕೆದಿಲಾಯ
2. ಸಾ.ರಾ. ವಾರಂಬಳ್ಳಿ
3. ಬಿ. ಸದಾಶಿವರಾವ್
4. ಹೆಚ್. ವಿ. ಶಿವಸ್ವಾಮಿ
5. ಎ.ಎಸ್. ಭಟ್
6. ಎ.ಆರ್. ರಾಮಯ್ಯ
7. ಬಿ.ಡಿ. ಶೆಣೈ
8. ಕೆ. ಎನ್. ಶ್ರೀಕಂಠಯ್ಯ
9. ಶ್ರೀಮತಿ ವನಜಾರಾಜನ್

| | | |
|---|---|---|
| ವ್ಯವಸ್ಥಾಪಕ ಸಂಪಾದಕರು | : | ಶ್ರೀ ಪಾ. ಚಂದ್ರಶೇಖರ ಚಡಗ |
| ಗೌರವ ಸಂಪಾದಕರು | : | ಶ್ರೀ ಬಿ.ವಿ. ಕೆದಿಲಾಯ |

ಖಾಸಗಿ ಪ್ರಸಾರಕ್ಕೆ ಮಾತ್ರ



# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ

ಸಂಪುಟ 10 ಜನವರಿ - ಮಾರ್ಚ್ 2007 ಸಂಚಿಕೆ - 3

ಈ ಸಂಚಿಕೆಯಲ್ಲಿ..........

ಪ್ರಿಯ ಓದುಗ,

ದಿನಾಂಕ 18.2.07 ರಂದು ಶ್ರೀ ಎಂ.ಗೋಪಾಲಕೃಷ್ಣ ಅಡಿಗರ 90ನೆಯ ಹುಟ್ಟುಹಬ್ಬ. ಆ ದಿನ ಬೆಂಗಳೂರಿನ ಬನಶಂಕರಿ ಎರಡನೆಯ ಹಂತದಲ್ಲಿ ಸುಚಿತ್ರಾ ಫಿಲ್ಮ್ ಸೊಸೈಟಿಯಲ್ಲಿ ಸುಚಿತ್ರಾ ಕಲಾಕೇಂದ್ರವು ಏರ್ಪಡಿಸುವ ಗೋಪಾಲಕೃಷ್ಣ ಅಡಿಗರ ಹುಟ್ಟುಹಬ್ಬದ ಸಂದರ್ಭದಲ್ಲಿ 'ಹಣತೆ'ಯ ಈ ತ್ರೈಮಾಸಿಕ ಸಂಚಿಕೆಯನ್ನು ತಮ್ಮ ಮುಂದೆ ಇಡಲು ತುಂಬಾ ಸಂತಸವಾಗುತ್ತಿದೆ. ಈ ಸಂಚಿಕೆಯಲ್ಲಿ ಗೋಪಾಲಕೃಷ್ಣ ಅಡಿಗರ 'ಶ್ರೇಷ್ಠತೆಯ ಕಲ್ಪನೆ' ಲೇಖನವನ್ನು ಮುದ್ರಿಸಲು ಶ್ರೀಮತಿ ಲಲಿತಾ ಅಡಿಗರು ನಮಗೆ ಅನುಮತಿ ಇತ್ತಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು. ಅಡಿಗರ ಕುರಿತು ಡಾ|| ಯು. ಆರ್. ಅನಂತಮೂರ್ತಿ ಮುಂತಾದ ಲೇಖಕರ ಲೇಖನಗಳೂ ಇವೆ. ಎಲ್ಲಾ ಲೇಖಕರಿಗೂ ನಮ್ಮ ಕೃತಜ್ಞತೆಗಳು. ಒಂದು ಜನಾಂಗದ ಕಣ್ಣು ತೆರೆಯಿಸಿದ ಕವಿ', ನವ್ಯ ಕಾವ್ಯದ ಪ್ರವರ್ತಕ, ಕುವೆಂಪು, ಬೇಂದ್ರೆಯ ನಂತರ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಮಹತ್ವದ ಕವಿ ಎಂದು ಮುಂತಾಗಿ ಕರೆಯಲ್ಪಟ್ಟ ಅಡಿಗರ ಕಾವ್ಯದ ಅಧ್ಯಯನವನ್ನು ಹೆಚ್ಚು ಹೆಚ್ಚು ಜನ ಮಾಡುವಂತಾಗಲಿ ಎಂಬ ಉದ್ದೇಶದಿಂದ ಈ ವರ್ಷದುದ್ದಕ್ಕೂ ಶಿವರಾಮ ಕಾರಂತ ವೇದಿಕೆಯು ಬೆಂಗಳೂರು, ಧಾರವಾಡ, ಉಡುಪಿ ಮುಂತಾದ ಕರ್ನಾಟಕದ ಬೇರೆಬೇರೆ ನಗರಗಳಲ್ಲಿ ಕೆಲವು ಉಪನ್ಯಾಸ ಕಾರ್ಯಕ್ರಮ, ವ್ಯಾಸಂಗ ಗೋಷ್ಠಿ ಅಥವಾ ಅಧ್ಯಯನ ಶಿಬಿರಗಳನ್ನು ಹಮ್ಮಿಕೊಂಡಿದೆ. 10.3.07 ರಂದು ರವೀಂದ್ರನಾಥ್ ಟಾಗೋರ್ ನಗರದ ತರಳಬಾಳು ಕೇಂದ್ರದಲ್ಲಿ ನಾವು ಆಚರಿಸಲಿರುವ ಅಡಿಗರ 90ನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ 'ವೇದಿಕೆ ಫೌಂಡೇಶನ್'ನ ವತಿಯಿಂದ ಋತ್ವಿಕ್ ಸಿಂಹ ಅವರು ಬರೆದು ನಿರ್ದೇಶಿಸಿದ 'ಮದುವೆ ಮದುನೆ' ಎನ್ನುವ ನಾಟಕ ಪ್ರದರ್ಶನವೂ ನಡೆಯಲಿದೆ. ಧಾರವಾಡದಲ್ಲಿ 15.4.07ರಂದು ಅವನಿ ರಸಿಕರ ರಂಗ ಮತ್ತು ಶಿವರಾಮ ಕಾರಂತ ವೇದಿಕೆ ಸಂಯುಕ್ತವಾಗಿ ಅಡಿಗರ ಹುಟ್ಟುಹಬ್ಬವನ್ನು ಆಚರಿಸಲು ಉದ್ಯುಕ್ತವಾಗಿವೆ.

ಶಿವರಾಮ ಕಾರಂತರು ಮತ್ತು ಗೋಪಾಲಕೃಷ್ಣ ಅಡಿಗರು ಉಡುಪಿ ಜಿಲ್ಲೆ (ಅಂದಿನ ದಕ್ಷಿಣ ಕನ್ನಡ ಜಿಲ್ಲೆ) ಕನ್ನಡ ಸಾಹಿತ್ಯಕ್ಕೆ ಕೊಟ್ಟ ಎರಡು ಅನರ್ಘ್ಯ ರತ್ನಗಳು. ಕಾರಂತರು ಉಡುಪಿ ತಾಲೂಕಿನ ಕೋಟದಲ್ಲಿ 10.10.1902ರಲ್ಲಿ ಜನಿಸಿ ಮಂಗಳೂರಿನಲ್ಲಿ ಇಂಟರ್ ಮೀಡಿಯೆಟ್ ಓದುತ್ತಿರುವಾಗಲೇ ಗಾಂಧೀಜಿಯವರ ಕರೆಗೆ ಓಗೊಟ್ಟು ಕಾಲೇಜು ಶಿಕ್ಷಣ ತ್ಯಜಿಸಿ ಗಾಂಧೀಜಿಯವರ ಆದರ್ಶಗಳನ್ನು ನೆಚ್ಚಿ ಹರಿಜನೋದ್ಧಾರ, ಖಾದೀ ಪ್ರಚಾರ, ಮುಂತಾದ ವಿಧಾಯಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾ ತಮ್ಮ ಸಾಮಾಜಿಕ ಕಳಕಳಿಯನ್ನು ಬಿಂಬಿಸಲು ಸಾಹಿತ್ಯ ಸೇವೆಯನ್ನು

ಕೈಗೊಂಡರು. ಅವರಿಗಿಂತ 15 ವರ್ಷ ನಂತರ 18.2.1918 ರಂದು ಗೋಪಾಲಕೃಷ್ಣ ಅಡಿಗರು ಕುಂದಾಪುರ ತಾಲೂಕಿನ ಮೊಗೇರಿಯಲ್ಲಿ ಹುಟ್ಟಿ ಬೈಂದೂರು, ಕುಂದಾಪುರಗಳಲ್ಲಿ ವಿದ್ಯಾಭ್ಯಾಸ ಮುಗಿಸಿ ತಮ್ಮ ಮುಂದಿನ ವಿದ್ಯಾಭ್ಯಾಸಕ್ಕೆ ಮೈಸೂರು ಮಹಾರಾಜ ಕಾಲೇಜನ್ನು ಸೇರಿದರು. ಕಾರಂತರ ಮತ್ತು ಅಡಿಗರ ಬದುಕು ಮತ್ತು ಸಾಹಿತ್ಯದಲ್ಲಿ ಕೆಲವು ಸಾಮ್ಯಗಳನ್ನು ಅಂತರಗಳನ್ನೂ ನಾವು ಕಾಣಬಹುದು.

ಕಾರಂತ ಮತ್ತು ಅಡಿಗ ಇಬ್ಬರೂ ಉಜ್ವಲ ದೇಶಪ್ರೇಮಿಗಳು. ಇಬ್ಬರೂ ಪ್ರಗತಿಪರವಾದ ವಿಚಾರಧಾರೆಗಳನ್ನು ಹೊಂದಿದ್ದವರು. ಆದರೆ ಇಬ್ಬರಿಗೂ ದಲಿತ ಬಂಡಾಯ ಸಾಹಿತಿಗಳಿಂದ 'ಸಂಪ್ರದಾಯವಾದಿ' ಎಂಬ ಹಣೆಪಟ್ಟಿಯನ್ನು ಕಟ್ಟಲಾಯಿತು. ಇವರಿಬ್ಬರಿಗೂ ವ್ಯಕ್ತಿ ಸ್ವಾತಂತ್ರ್ಯದ ಮೇಲೆ ಅಪಾರ ಗೌರವವಿದ್ದುದರಿಂದ ಕಮ್ಯೂನಿಸ್ಟ್ ಸಿದ್ಧಾಂತ ಮೆಚ್ಚಿಗೆಯಾಗಲಿಲ್ಲ. 1933ರಷ್ಟು ಹಿಂದೆ ಚೋಮನದುಡಿಯಂತಹ ಕೃತಿರಚಿಸಿದ ಕಾರಂತರಿಗೂ

"ಅನ್ನವನು ಕೊಡುಮೊದಲು, ಬಟ್ಟೆಯನು ಕೊಡು ಉಡಲು
ಕಟ್ಟಿಕೊಡು ಮನೆಗಳನು ಬಳಿಕ ನೀನು
ಕವಿಯಾಗಿ ಬಾ, ಶಾಸ್ತ್ರಿಯಾಗಿ, ಧಾರ್ಮಿಕನಾಗಿ ಬಾ
ಮನುಜತೆಯ ಕಲಿಸು ಬಾ, ಇವನದನು ಕಲಿಯಬಲ್ಲ
ಇದು ಮೊದಲು, ಆಮೇಲೆ ಉಳಿದುದೆಲ್ಲ"

ಎಂದು 1949 ರಷ್ಟು ಹಿಂದೆ ಬರೆದ ಅಡಿಗರಿಗೂ ಪ್ರತಿಗಾಮಿ ಎನ್ನುವ ಹಣೆಪಟ್ಟಿಯನ್ನು ಕಟ್ಟಿರುವುದು ನಮ್ಮ ಕಾಲದ ದೌರ್ಭಾಗ್ಯ. ಕಾರಂತರೂ, ಅಡಿಗರೂ ನಿಷ್ಠುರ ಸತ್ಯವಾದಿಗಳು. ಇಬ್ಬರೂ ರಾಜಕೀಯ ಪ್ರಜ್ಞೆಯನ್ನು ಬದುಕಿನಲ್ಲೂ ಬರಹದಲ್ಲೂ ವ್ಯಕ್ತಪಡಿಸಿದವರು. ಅವರ ರಾಜಕೀಯ ಪ್ರಜ್ಞೆ ಮೂಲತಃ ವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ಆಳವಾದ ಕಳಕಳಿ, ಪ್ರಜಾಸತ್ತೆಯ ಪರಮ ಮೌಲ್ಯಗಳಾದ ಸಮಾನತೆ, ಸ್ವಾತಂತ್ರ್ಯಗಳ ಕುರಿತು ಅವರಿಗಿದ್ದ ಅಪಾರ ನಿಷ್ಠೆಗೆ ಸಂಬಂಧಿಸಿದ್ದೇ ಹೊರತು ಅಧಿಕಾರದ ಲಾಲಸೆ ಇಬ್ಬರಿಗೂ ಇರಲಿಲ್ಲ. ಜನಪ್ರಿಯತೆಗಿಂತ ಶ್ರೇಷ್ಠತೆಗೆ ಒತ್ತು ಕೊಟ್ಟು ನುಡಿದಂತೆ ನಡೆದ ಈ ಮಹನೀಯರು ಪ್ರಾತಃಸ್ಮರಣೀಯರು.

ನಮ್ಮ ಕಳೆದ ಸಂಚಿಕೆ ಪ್ರಕಟಗೊಂಡು ಮೂರು ತಿಂಗಳುಗಳೇ ಕಳೆದಿವೆ. ಈತನ್ಮಧ್ಯೆ ಹಲವು ಪ್ರಮುಖ ಘಟನೆಗಳು ನಡೆದವು. ನಮ್ಮೆಲ್ಲರ ಅಚ್ಚುಮೆಚ್ಚಿನ ಕವಿ ಡಾ|| ಜಿ.ಎಸ್.ಶಿವರುದ್ರಪ್ಪನವರಿಗೆ 'ರಾಷ್ಟ್ರಕವಿ' ಪ್ರಶಸ್ತಿ ದೊರಕಿ ಅವರೂ ಮಂಜೇಶ್ವರ ಗೋವಿಂದ ಪೈ, ಕುವೆಂಪುರವರ ನಂತರ ಮೂರನೆಯ ರಾಷ್ಟ್ರಕವಿ ಆದರು. ಶಿವರಾಮ

ಕಾರಂತ ವೇದಿಕೆಯನ್ನು 1993 ರಲ್ಲಿ ಡಾ|ಜಿ.ಎಸ್.ಶಿವರುದ್ರಪ್ಪನವರು ಉದ್ಘಾಟಿಸಿದ್ದರು. ನಮ್ಮ ದಶಮಾನೋತ್ಸವದ ಉದ್ಘಾಟನೆಯನ್ನೂ ಅವರೇ ಮಾಡಿದ್ದರು. ನಮ್ಮ ಬೆಳ್ಳಿಹಬ್ಬವನ್ನೂ ಅವರೇ ಉದ್ಘಾಟಿಸಲಿ ಎಂದು ಹಾರೈಸೋಣ.

17.01.07ರಂದು ಶಿವರಾಮ ಕಾರಂತ ವೇದಿಕೆ ಹದಿನೈದನೆಯ ವರ್ಷಕ್ಕೆ ಕಾಲಿರಿಸಿದೆ. ಈ ವರ್ಷ ನಮ್ಮ ಕಾರ್ಯ ಚಟುವಟಿಕೆಗಳನ್ನು ಮತ್ತಷ್ಟು ಚುರುಕುಗೊಳಿಸುವ ಇಚ್ಛೆ ನಮ್ಮದು. ಕಾರ್ಯಕಾರೀ ಸಮಿತಿಯ ಸದಸ್ಯರೆಲ್ಲಾ ನನ್ನ ಕೈ ಬಲಪಡಿಸುತ್ತಿದ್ದಾರೆ. ಕನ್ನಡ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ ಮುಂತಾದ ದೊಡ್ಡ ಸಂಸ್ಥೆಗಳ ನಡುವೆ ನಮ್ಮ 'ಹಣತೆ'ಗೂ ಕನ್ನಡವನ್ನು ಬೆಳಗುವ ಕಾರ್ಯದಲ್ಲಿ ತನ್ನದೇ ಆದ ಸ್ಥಾನವಿದೆ ಎಂದು ನಾನು ನಂಬಿದ್ದೇನೆ.

**ಪ್ರಾ. ಚಂದ್ರಶೇಖರ ಚಡಗ**

ವ್ಯವಸ್ಥಾಪಕ ಸಂಪಾದಕ



## ಶ್ರದ್ಧಾಂಜಲಿ

ಹೆಸರಾಂತ ಸಾಹಿತಿ, ಸಮಾಜಸೇವಕ ಹಾಗೂ ಕನ್ನಡದ ಪರಿಚಾರಕರಾಗಿದ್ದ ಪಿ.ಸೂರ್ಯನಾರಾಯಣ ಚಡಗರ ವಿಧಿವಶರಾದುದು (14.11.06) ವಿಷಾದಕರ ಸಂಗತಿ. ಎಪ್ಪತ್ತೇಳು ವಸಂತ ಕಂಡ ಚಡಗರದು ಬಹು ಮುಖವ್ಯಕ್ತಿತ್ವ. ನಿರ್ಮತ್ಸರ ಹಾಗೂ ಲವಲವಿಕೆಯ ಪ್ರತಿಮೂರ್ತಿಯಾಗಿದ್ದ ಅವರು ಸಕಲ ಜೀವಾತ್ಮರಿಗೂ ಲೇಸನ್ನು ಬಯಸುವ ಅಂತಃಕರಣದವರಾಗಿದ್ದರು. ಇಪ್ಪತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದಿದ್ದ ಅವರ 'ಮನೆತನ' ಕಾದಂಬರಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿತ್ತು. 1000 ಪುಟಗಳ 'ನಗೆನಂದನ' ಹಾಗೂ 1200 ಪುಟಗಳ 'ಸುಹಾಸ' ಎಂಬ ಬೃಹದ್ ಗ್ರಂಥಗಳನ್ನು ಹೊರ ತಂದಿದ್ದರು. ತನ್ಮೂಲಕ ಕನ್ನಡ ಸಾಹಿತ್ಯ ಹಾಗೂ ಸಾಹಿತಿಗಳ ಅಪೂರ್ವ ದಾಖಲೆಯನ್ನು ಒದಗಿಸಿದ್ದರು. ಅನಕೃ, ತರಾಸು, ರಾಜರತ್ನಂ, ಒಡಗೂಡಿ 'ಸಾಹಿತ್ಯದ ಕಟ್ಟೆ'ಯೊಂದನ್ನು ಕಟ್ಟಿ ಸಾಹಿತ್ಯ ಜಿಜ್ಞಾಸೆ ನಡೆಸಿದ್ದರು. ಮಾಸ್ತಿ, ಕಾರಂತ, ವಿಸೀ, ಗೋಕಾಕ್, ರಾಜರತ್ನಂ, ಬೀಚಿ ನಾ.ಕಸ್ತೂರಿ, ಎಂ.ಕೆ ಇಂದಿರಾ, ಮೊದಲಾದ ಸಾಹಿತ್ಯ ದಿಗ್ಗಜರಿಗೆ ಅದ್ದೂರಿಯ ಸಮಾರಂಭಗಳನ್ನೇರ್ಪಡಿಸಿದ ಸಾಹಿತ್ಯಾರಾಧಕರಾಗಿದ್ದರು. ದಿವಂಗತರಿಗೆ ನಮ್ಮ ಹೃತ್ಪೂರ್ವಕ ಶ್ರದ್ಧಾಂಜಲಿ.

# ಶ್ರೇಷ್ಠತೆಯ ಕಲ್ಪನೆ

**-ಗೋಪಾಲಕೃಷ್ಣ ಅಡಿಗ**

ಶ್ರೇಷ್ಠ ಅತ್ಯುತ್ತಮ ಎಂಬ ಶಬ್ದಗಳೂ ಅವು ಸೂಚಿಸುವ ಅರ್ಥವೂ ನಮಗೆಲ್ಲರಿಗೂ ಗೊತ್ತು. ಜೀವನದ ಪ್ರತಿಯೊಂದು ಅಂಗದಲ್ಲೂ ಕೃತಿಯಲ್ಲೂ ಇದು ಕಳಪೆ, ಇದು ಸಾಧಾರಣ, ಇದು ಉತ್ತಮ ಎಂದು ಗುರುತಿಸುವ ಶಕ್ತಿ ಎಲ್ಲರಿಗೂ ಒಂದಲ್ಲ ಒಂದು ಮಟ್ಟದಲ್ಲಿ ಇದ್ದೇ ಇದೆ. ಈ ಶಕ್ತಿ ಸರಿಯಾಗಿ ಕೆಲಸ ಮಾಡಬೇಕಾದರೆ ಸಮಾಜದಲ್ಲಿ ಎಲ್ಲರೂ ಸಾಮಾನ್ಯವಾಗಿ ಒಪ್ಪುವ, ಅಥವಾ ಗುರುತಿಸುವ ಒಂದು ಶ್ರೇಷ್ಠತೆಯ ಕಲ್ಪನೆ ಅಗತ್ಯ. ಮನುಷ್ಯನ ಜೀವನ ವ್ಯವಹಾರಗಳಲ್ಲಿ ವ್ಯಕ್ತವಾಗುವ ಅನೇಕಾನೇಕ, ಪರಸ್ಪರ ವಿರುದ್ಧ ಎನ್ನುವಂತೆ ತೋರುವ ಆಶೆ-ಆಕಾಂಕ್ಷೆಗಳು, ಎಳೆತ ಸೆಳೆತಗಳು, ಕನಸು ನನಸುಗಳೆಲ್ಲವನ್ನೂ ಗಮನದಲ್ಲಿಟ್ಟುಕೊಂಡು ಅವುಗಳಲ್ಲಿ ಪ್ರತಿಯೊಂದಕ್ಕೂ ಅದರದರ ಹಂತವನ್ನು ನಿರ್ದೇಶಿಸಿ, ಇದು ಅಧಮ, ಇದು ಮಧ್ಯಮ ಇದು ಸರ್ವೋತ್ತಮ ಅಥವಾ ಶ್ರೇಷ್ಠ ಎಂದು ನಿರ್ಧರಿಸುವುದು ಒಂದು ಜನಾಂಗದ ಅಭಿವೃದ್ಧಿಗೆ ಅತ್ಯಗತ್ಯವಾದ ಮೂಲಭೂತವಾದ ಕೆಲಸ. ಇಂಥ ಕೆಲಸ ಮಾಡುವವರನ್ನು ಋಷಿ ಅಥವಾ ದಾರ್ಶನಿಕ ಎಂದು ಕರೆಯುತ್ತಿದ್ದರು - ಹಿಂದೆ. ಈಗಲೂ ಅತ್ಯಗತ್ಯವಾದ ಈ ಕೆಲಸ ಮಾಡುವವರಿಗೆ ಬೇರೆ ಹೆಸರನ್ನೂ ಇಡಬಹುದು. ಆದರೆ ಆಧುನಿಕ ಜಗತ್ತಿನ ದೌರ್ಭಾಗ್ಯವೋ ಸೌಭಾಗ್ಯವೋ ಅಂತೂ ಇಂದು ಈ ಕೆಲಸದ ಬಹುಭಾಗವನ್ನು ಕವಿ ಸಾಹಿತಿಗಳೇ ಮಾಡಬೇಕಾಗಿ ಬಂದಿರುವುದು ಇಂದಿನ ವಿಶೇಷ. ನಮ್ಮ ಕವಿ ಸಾಹಿತಿಗಳು ಈ ಎತ್ತರಕ್ಕೆ ಏರಬಲ್ಲರೇ ಎಂಬ ಪ್ರಶ್ನೆಗಿಂತ ಹೆಚ್ಚಾಗಿ ಅಂಥವರು ಇನ್ನು ಮುಂದಾದರೂ ಇಲ್ಲಿ ಮೈದೋರುವರೇ ಎಂಬ ಪ್ರಶ್ನೆ ಈಗ ಹೆಚ್ಚು ಸಂಗತವಾದದ್ದು. ಏಕೆಂದರೆ ಈವರೆಗೆ ನಡೆದಷ್ಟು ಕೆಲಸದಿಂದ ನಮ್ಮ ಸಮಾಜದಲ್ಲಿ ಹುಟ್ಟಿರುವ ಬುದ್ಧಿಯ, ಮೌಲ್ಯದ ಗೊಂದಲ ಕಡಿಮೆಯಾಗಿಲ್ಲ, ಹೆಚ್ಚಾಗಿದೆ. ಆದಕಾರಣ ನಮಗೆ ಭರವಸೆಗೆ ಆಸ್ಪದ ಇರುವುದು ಭವಿಷ್ಯದಲ್ಲಿ ಮಾತ್ರ.

ಕವಿ ಸಾಹಿತಿಗಳ ಕೆಲಸ ಮೊದಲಾಗುವುದು ಮಹಾಜನತೆಯ ವ್ಯವಹಾರ ಜಗತ್ತಿನ ದಿನದಿನದ ಗೊಂದಲದಲ್ಲಿಯೇ, ಅದರ ಮೂಲಕವಾಗಿಯೇ. ಈ ಗೊಂದಲದ ನಡುವೆಯೂ ಸ್ಥಿರವೂ ಸ್ಪಷ್ಟವೂ ಅದೊಂದು ಆಶ್ರಯಸ್ಥಾನವನ್ನು ಪ್ರತಿಯೊಬ್ಬನೂ ಹುಡುಕುತ್ತಲೇ ಇರುತ್ತಾನೆ. ಈ ಹುಡುಕಾಟವೇ ಮೌಲ್ಯಸಂಶೋಧನೆ. ಈ

ಸಂಶೋಧನೆಯಿಂದ ಲಭಿಸುವಂಥಾದ್ದೇ ಶ್ರೇಷ್ಠತೆಯ ಕಲ್ಪನೆ. ದೃಢವಾದ ಅಂಥ ಒಂದು ಕಲ್ಪನೆಯ ಆಶ್ರಯ ದೊರೆತಾಗ್ಗೆ ಈ ಜಗತ್ತಿನ ಎಲ್ಲ ವಿದ್ಯಮಾನಗಳಿಗೂ ಅದರದರ ಸ್ಥಾನವನ್ನು ಗುರುತಿಸುವುದು ನಮಗೆ ಸಾಧ್ಯವಾಗಿ ಗುರಿಯ ಬಗ್ಗೆ ನಿಚ್ಚಳವಾದ ಅರಿವು ಮೂಡುತ್ತದೆ. ಒಬ್ಬ ವ್ಯಕ್ತಿಯ ಅಭಿವೃದ್ಧಿಗೆ ಹೇಗೋ ಹಾಗೆ ಒಂದು ಜನಾಂಗದ ಅಥವಾ ಸಮಾಜದ ಪ್ರಗತಿ ಸುಸ್ಥಿತಿಗೂ ಅಂಥ ಅರಿವು ಅಗತ್ಯ. ಬಹುಜನದ ಬದುಕಿನಲ್ಲಿ ಶ್ರೇಷ್ಠತೆಯ ಈ ಕಲ್ಪನೆಗೂ ಅವರ ವಾಸ್ತವಿಕ ಜೀವನಕ್ಕೂ ಬಹಳ ಅಂತರವಿರುವುದು ಸಹಜ. ಆದರೆ ಒಟ್ಟಿನಲ್ಲಿ ಇಡೀ ಸಮಾಜ ಆ ಅಂತರವನ್ನು ಕಡಿಮೆ ಮಾಡಲು ಹೆಣಗುತ್ತಿರುವುದೂ ಅಲ್ಲಲ್ಲಿ ಕೆಲವರು ಶ್ರೇಷ್ಠತೆಯ ಕಡೆಗೆ ನಿರಂತರವಾಗಿ ಚಲಿಸಿದಾಗ, ಶ್ರೇಷ್ಠತೆಯ ಅಂಚನ್ನು ಮುಟ್ಟಿದಾಗ ಆ ವಿಶೇಷವನ್ನು ಗುರುತಿಸಿ ಮನ್ನಿಸುವುದೂ ಇಡೀ ಸಮಾಜದ ಸುಸ್ಥಿತಿಗೆ ಮಾತ್ರವಲ್ಲ, ಏಳ್ಗೆಗೂ ಅಗತ್ಯ: ನಮ್ಮ ಯುವಜನರಲ್ಲಿ ಸಹಜವಾಗಿರುವ ಸಾಹಸ ಪ್ರವೃತ್ತಿಗೇ ತಕ್ಕ ಪ್ರೇರಣೆಗೆ; ಅವರಲ್ಲಿ ಜೀವಂತವಿರುವ ಆದರ್ಶಪರತೆಗೆ ತಕ್ಕ ಗುರಿಯನ್ನು ತೋರುವುದಕ್ಕೆ.

ಮನುಷ್ಯನ ವಿಶೇಷವೆಂದರೆ ಏನು ಇದೆಯೋ ಅದರಲ್ಲಿ ನಿರಂತರವಾದ ಅತೃಪ್ತಿ. ಈ ಅತೃಪ್ತಿಗೆ ಕಾರಣ ನಮ್ಮಲ್ಲಿ ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಇರುವ ಒಂದು ಅಪೂರ್ವ ಆದರ್ಶಚಿತ್ರ. ಮನಸ್ಸಿನಲ್ಲಿ ರೂಪುಗೊಳ್ಳುವ ಈ ಆದರ್ಶಚಿತ್ರ ಅಥವಾ ಆದರ್ಶದ ಚಿತ್ರ ಅಮೂರ್ತವಾದದ್ದು; ಸದಾ ಮೂರ್ತಗೊಳ್ಳಲು ತವಕಿಸುತ್ತಿರುವ, ಎಂದೂ ಪರಿಪೂರ್ಣವೂ ದೋಷರಹಿತವೂ ಆಗಿ ಮೂರ್ತಗೊಳ್ಳಲು ಸಾಧ್ಯವೇ ಇಲ್ಲದ ಕಲ್ಪನೆ ಅದು. ಒಂದು ಕಡೆ ಶ್ರೇಷ್ಠತೆಯ ಈ ಅಮೂರ್ತ ಕಲ್ಪನೆ ಇದ್ದರೆ ಇನ್ನೊಂದು ತುದಿಯಲ್ಲಿ ಸದಾಕಾಲವೂ ರೂಪುಗೊಳ್ಳುತ್ತಿರುವ ನಾನಾ ವಿಧದ ಮನುಷ್ಯ ಚರಿತ್ರಗಳು, ವಾಗ್ರೂಪಗಳು, ಕೃತಿಗಳು. ಒಂದು ಆದರ್ಶ ಜಗತ್ತಿಗೆ ಸೇರಿದ್ದಾದರೆ ಇನ್ನೊಂದು ವಾಸ್ತವ ಜಗತ್ತಿಗೆ ಸಂಬಂಧಿಸಿದ್ದು. ಈ ಎರಡರ ಮಧ್ಯೆ ಇರುವ ಅಂತರ ಪರೀಕ್ಷೆಯಲ್ಲಿ ಶೇಕಡಾ ಇರುವ ಹಾಗೆ. ಶೇಕಡಾವನ್ನು ಆಗೀಗ ಗಣಿತ ಭೌತಶಾಸ್ತ್ರಗಳಲ್ಲಿ ಒಬ್ಬಿಬ್ಬರು ಮುಟ್ಟುವುದು ಸಾಧ್ಯವಾದರೂ ಉಳಿದೆಲ್ಲ ವಿಷಯಗಳಲ್ಲೂ ಹೆಚ್ಚಿನವರು ಮೂವತ್ತೈದರಿಂದ ಅರವತ್ತು ಎಪ್ಪತ್ತರವರೆಗೂ ತುಯ್ಯುತ್ತಿದ್ದರೆ ಕೆಲವರು ಸದಾಕಾಲವೂ ಸೊನ್ನೆಯಿಂದ ಮುವತ್ತೈದರವರೆಗೆ ಕುಗ್ಗುತ್ತ ಹಿಗ್ಗುತ್ತ ಇರುತ್ತಾರೆ.

ಒಟ್ಟಿನಲ್ಲಿ ಐವತ್ತರಿಂದಾಚೆ ಹಾಯದವರದೇ ಬಹುಮತ. ಅಂಥವರಿಗೆಲ್ಲ ಶೇಕಡಾದ ಮೇಲೆ ಯಾವಾಗಲೂ ಇರುವ ಕ್ರೋಧ ಇತ್ತೀಚೆಗೆ ಅಸಹನೀಯವಾಗುತ್ತ

ಬರುತ್ತಿದೆ. ಶೇಕಡಾದ ಬದಲು ಐವತ್ತೇ ಇದ್ದರೆ ಅನುಕೂಲ ಅದೇ ನ್ಯಾಯ ಅಂತ ಐವತ್ತರ ಬಂಟರಿಗೂ ಅದು ಹತ್ತೋ ಹದಿನೈದೋ ಇದ್ದರೆ ಕೈ ನೋಡಬಹುದಾಗಿತ್ತು ಎಂದು ಶೂನ್ಯಸ್ಥರಿಗೂ ಅನ್ನಿಸಬಹುದು. ಅಂಥವರದ್ದೇ ಈಗ ಬಹುಮತ ಇರುವುದರಿಂದ ಬಡಪಾಯಿ ಶೇಕಡಾಕ್ಕೆ ಯಾವಾಗ ಮನ್ನಣೆ ಮನ್ನಾ ಆಗುವುದೋ ಹೇಳುವುದು ಕಷ್ಟ. ನಮ್ಮ ಸಮಾಜದಲ್ಲಿ ನಡೆಯುತ್ತಿರುವ ಗೊಂದಲ ಇದೇ ಬಗೆಯದು. ಆದರೆ ಶೇಕಡಾದ ಒಂದು ಕಲ್ಪನೆ ಇಲ್ಲದೆ ಹೋದರೆ ಹೇಗೆ ಉತ್ತರ ಪತ್ರಿಕೆಗಳ ಮೌಲ್ಯನಿರ್ಣಯ ಅಶಕ್ಯವಾಗುವುದೋ ಹಾಗೆಯೇ ಶ್ರೇಷ್ಠತೆಯ ಕಲ್ಪನೆ ಇಲ್ಲವಾದರೆ ಯಾವ ಮನುಷ್ಯ ಉತ್ತಮ, ಯಾವ ಕೃತಿ ಶ್ರೇಷ್ಠ ಎಂಬ ನಿರ್ಣಯವೇ ಅಸಾಧ್ಯವಾಗಿ ನಮ್ಮ ವ್ಯವಹಾರವೆಲ್ಲವೂ ಅರ್ಥಹೀನವಾಗಿ ಹೋಗುತ್ತದೆ. ಉತ್ತರಗಳನ್ನು ಪರಿಶೀಲಿಸಿ ನಂಬರು ಕೊಡುವ ಅಧ್ಯಾಪಕರು ನಿಸ್ಪೃಹರೂ ನಿಷ್ಪಕ್ಷಪಾತಿಗಳೂ ವಸ್ತುನಿಷ್ಠ ಮಾನದಂಡಗಳನ್ನು ಉಪಯೋಗಿಸುವವರೂ ಆಗಿರಬೇಕೆಂದು ನಾವು ಬಯಸುತ್ತೇವೆ. ಇದೇ ಮಾತು ಜೀವನದ ಎಲ್ಲ ಕೃತಿಗಳಿಗೂ ಸಾಹಿತ್ಯಕೃತಿ ವಿಮರ್ಶೆಗಳಿಗೂ ಸಲ್ಲುತ್ತದೆ.

ಶ್ರೇಷ್ಠತೆಯ ಈ ಕಲ್ಪನೆಯ ಕಾರ್ಯಸಾಧನ ಮಾರ್ಗವಾಗಿ ಇರುವಂಥದು ಇದು ಅಧಮ, ಇದು ಮಧ್ಯಮ, ಇದು ಉತ್ತಮ ಎಂಬ ತಾರತಮ್ಯ ವಿವೇಕ. ಯಾವ ಸಮಾಜದಲ್ಲಿ ಈ ವಿವೇಕ ನಿಚ್ಚಳವಾಗಿರುತ್ತದೋ ಅಲ್ಲಿ ಮಾತ್ರ ಅಭಿವೃದ್ಧಿ ಸಾಧ್ಯವಾಗುತ್ತದೆ; ಇಡೀ ಸಮಾಜದ ನಿರಂತರವಾದ ಗತಿಗೇ ಒಂದು ಗುರಿ ಮೂಡಿ ಎಲ್ಲ ಕೆಲಸಗಳೂ ಬದುಕನ್ನು ಸರ್ವಾಂಗಸುಂದರವನ್ನಾಗಿ ಮಾಡಲು ದುಡಿಯುತ್ತವೆ. ಇಂಥ ಒಂದು ಕರಾರುವಾಕ್ಕಾದ ವಿವೇಕ ನಮ್ಮ ಪೂರ್ವಿಕರಲ್ಲಿ ಇದ್ದದ್ದರಿಂದಲೇ ಇಲ್ಲಿ ಅನೇಕ ಉತ್ತಮ ಕೃತಿಗಳ ಸೃಷ್ಟಿ ಸಾಧ್ಯವಾಯಿತು. ಅಂಥ ಅರಿವು ಇದ್ದದ್ದರಿಂದಲೇ ಪಾಶ್ಚಾತ್ಯ ಲೋಕದಲ್ಲಿ ಹೊಸ ಹೊಸ ಸಂಶೋಧನೆ, ನಿರ್ಮಾಣ, ಕೃತಿರಚನೆ ಸಾಧ್ಯವಾಗಿ ಜಗತ್ತಿಗೇ ಬೆಳಕು ಹಬ್ಬಿತು. ಈ ತಾರತಮ್ಯಜ್ಞಾನವೂ ಕೂಡಾ ಸಾರ್ವತ್ರಿಕವಾಗಿ ಜೀವನದ ಎಲ್ಲ ವಿಭಾಗಗಳಲ್ಲೂ ವ್ಯಕ್ತವಾಗುವುದೇ ಸಮಾಜದ ಸಮಸ್ಥಿತಿಗೆ ಸೂಚನೆ. ಹಾಗೆ ಅದು ಸರ್ವತ್ರ ವ್ಯಕ್ತವಾದಾಗಲೇ ಸಾಹಿತ್ಯದಲ್ಲೂ ಸಾಹಿತ್ಯ ವಿಮರ್ಶೆಯಲ್ಲೂ ಅದು ವ್ಯಕ್ತವಾಗಬಲ್ಲುದು. ನಮ್ಮ ಇಂದಿನ ಈ ಮಾನಸಿಕ ಗೊಂದಲದ ಪರಿಸ್ಥಿತಿಯಲ್ಲಿ ತೀರ ಸಾಮಾನ್ಯವಾದದ್ದೇ ತೀರ ಶ್ರೇಷ್ಠವೆಂದು ಪರಿಗಣಿತವಾಗುತ್ತಿದ್ದರೆ ಆಶ್ಚರ್ಯವೇನು? ಅತ್ಯಂತ ಸಾಮಾನ್ಯ ಬುದ್ಧಿಚರಿತ್ರವುಳ್ಳವನು ಬಹುಮತದ ಬಲದಿಂದ ಶ್ರೇಷ್ಠ ಸ್ಥಾನವನ್ನಲಂಕರಿಸಿ ದರ್ಬಾರು ನಡೆಸತೊಡಗುವಾಗ ಅದನ್ನು ಕಂಡ

ಜನಸಮುದಾಯದಲ್ಲಿ ಶ್ರೇಷ್ಠತೆಯ ಬಗ್ಗೆ ಸರಿಯಾದ ಕಲ್ಪನೆ ಮೂಡದೆ ಇರುವುದು ಸೋಜಿಗವಲ್ಲ. ಅದೇ ರೀತಿ ಬಹುಮತದ ಬೆಂಬಲದಿಂದಲೂ ಅಧಿಕಾರ ಸ್ಥಾನದ ಮಹಿಮೆಯಿಂದ ಬರುವ ಪ್ರಚಾರದಿಂದಲೂ ತೀರ ಸಾಮಾನ್ಯ ಕೃತಿಗೂ ಮಹಾಕೃತಿಯ ಪಟ್ಟ ದೊರೆಯುವುದೂ ನಮಗೆ ಕಂಡುಬರುತ್ತದೆ. ಇಂಥ ಪರಿಸ್ಥಿತಿಯಲ್ಲಿ ಯಾವುದು ಶ್ರೇಷ್ಠವಾದುದು. ಯಾವ ಮನುಷ್ಯ ಉತ್ತಮ ಮನುಷ್ಯ ಎಂದು ನಿರ್ಣಯಿಸಲು ಅಸಾಧ್ಯವಾಗುವಂಥ ಮನಃಸ್ಥಿತಿ ನಮ್ಮ ಜನಸಾಮಾನ್ಯರಲ್ಲೂ, ಯಾವ ಕೃತಿ ಉತ್ತಮ ಯಾವುದು ಸಾಮಾನ್ಯ ಯಾವುದು ತೀರ ಕಳಪೆ ಎಂದು ವಿವೇಚಿಸಲು ಅಸಮರ್ಥವಾದ ಅಭಿರುಚಿ ನಮ್ಮ ಓದುಗರಲ್ಲೂ ಹೆಚ್ಚು ಹೆಚ್ಚಾಗಿ ಈಗ ಕಂಡುಬರುತ್ತಿರುವುದು ಕೇವಲ ಬುದ್ಧಿಜೀವನದ ಅವನತಿಯನ್ನು ಮಾತ್ರವಲ್ಲ, ಇಡೀ ದೇಶದ ಸತ್ವವೇ ಕುಂದುತ್ತಿರುವುದನ್ನು ಸೂಚಿಸುತ್ತದೆ. ಈ ಪರಿಸ್ಥಿತಿ ಹೀಗೇ ಮುಂದುವರಿದರೆ ಇಡೀ ದೇಶವನ್ನೇ ಅಂಧಕಾರ ಕವಿದು ಮನಸ್ಸಿನ ಕೆಲಸವೇ ಸಂಪೂರ್ಣ ನಷ್ಟವಾಗುವ ಅಥವಾ ತಡೆದು ನಿಲ್ಲುವ ಅಪಾಯ ಅಸಂಭವವಲ್ಲ.

ಪ್ರಜಾಪ್ರಭುತ್ವದಲ್ಲಿ ಬಹುಮತದ ಪಾತ್ರ ಮುಖ್ಯವೇ ಆದರೂ ಅದು ಕಾರ್ಯ ನಿರ್ವಹಣೆಯ ಅನಿವಾರ್ಯ ತಂತ್ರವಲ್ಲದೆ ಪ್ರಜಾಪ್ರಭುತ್ವದ ಮೂಲತತ್ವವಲ್ಲ. ಈ ಮಾತನ್ನು ಮರೆತು ಪ್ರಜಾತಂತ್ರವನ್ನು ಕೇವಲ ಬಹುಮತ ರಾಜ್ಯ ಎಂದು ಸರಳ ಗೊಳಿಸುವುದರಿಂದ ಏನೆಲ್ಲ ದುರಂತ ಸಂಭವಿಸಬಹುದೋ ಅವೆಲ್ಲವೂ ಈಗ ನಮ್ಮ ದೇಶದಲ್ಲಿ ಸಂಭವಿಸುತ್ತಿವೆ, ಪ್ರಜಾಪ್ರಭುತ್ವದ ಮೂಲತತ್ವ ಜೀವನದ ವೈವಿಧ್ಯದ ಅರಿವು; ಆ ಅರಿವಿನಿಂದ ಭಿನ್ನಾಭಿಪ್ರಾಯದ ಬಗ್ಗೆ ಹುಟ್ಟುವ ಕಾತರಪೂರ್ಣವಾದ ಗೌರವ. ಈ ಮೂಲತತ್ವವನ್ನು ಮರೆತರೆ ಕೇವಲ ತಂತ್ರವಾದದ್ದು ಮೂಲಮಂತ್ರ ಎಂದು ಜನ ಭ್ರಮಿಸಿ ಸಮಾಜದ ಎಲ್ಲ ಅಂಗಗಳೂ ಅತಂತ್ರವಾಗುತ್ತವೆ. ಏಕೆಂದರೆ ವ್ಯಕ್ತಿಜೀವನದ ಸುಃಸ್ಥಿತಿ ಹೇಗೋ ಹಾಗೆ ಸಮಾಜದ ಜೀವನದ ಸುಸ್ಥಿತಿಯೂ ಇರುವುದು ಪರಸ್ಪರ ವಿರುದ್ಧ ಎನ್ನಿಸುವಂಥ ಬೇರೆ ಬೇರೆ ವೃತ್ತಿ ಪ್ರವೃತ್ತಿಗಳನ್ನೂ ಮನೋಧರ್ಮಗಳನ್ನೂ ಎಳೆತ ಸೆಳೆತಗಳನ್ನೂ ಸಮತೂಕದಲ್ಲಿಡಬಲ್ಲ ಬುದ್ಧಿಯ ಕೆಲಸದಿಂದ. ತಿನ್ನುವ ಆಶೆ ಹೇಗೆ ನಮ್ಮಲ್ಲಿ ಇದೆಯೋ ಹಾಗೆಯೇ ತಿನ್ನಿಸುವ ಆಶೆಯೂ ಇದೆ. ಅಧಿಕಾರದ ಆಶೆ ಇರುವ ಹಾಗೆ ನಮ್ರನಾಗುವ, ತಲೆಬಾಗುವ ಪ್ರವೃತ್ತಿಯೂ ಇದೆ. ಹಣವನ್ನು ಹೆಚ್ಚು ಹೆಚ್ಚಾಗಿ ಸಂಪಾದಿಸಿ ಕೂಡಿಡುವ ಆಶೆ ಇರುವ ಹಾಗೆ ಅದನ್ನು ತನಗಾಗಿ ತನ್ನವರಿಗಾಗಿ, ಸತ್ಕಾರ್ಯಗಳಿಗಾಗಿ, ವಿನಿಯೋಗಿಸುವ ಆಶೆಯೂ ಇದೆ. ಈ ದೇಹಕ್ಕೆ ಸಂಬಂಧಪಟ್ಟಂತೆ

ಅನೇಕ ಭೋಗಗಳ ಆಶೆ ಇದ್ದರೂ ಈ ಎಲ್ಲವನ್ನೂ ತ್ಯಜಿಸಿ ತನ್ನ ಸುತ್ತಮುತ್ತಲಿನವರ ಒಳ್ಳೆಯದಕ್ಕಾಗಿ, ಆತ್ಮದ ಉನ್ನತಿಗಾಗಿ ತ್ಯಾಗ ಮಾಡುವ ಪ್ರವೃತ್ತಿಯೂ ಇದೆ. ಈ ಲೋಕದ ಎಳೆತ ಹೇಗೆ ಇದೆಯೋ ಹಾಗೆಯೇ ಆ ಲೋಕದ ಸೆಳೆತವೂ ಉಂಟು. ಈ ದ್ವಂದ್ವಗಳನ್ನು ಒಂದಕ್ಕೊಂದು ಸಮತೂಕಗೊಳ್ಳುವಂತೆ ಮಾಡುವುದೇ ವಿವೇಕದ ಕೆಲಸ. ಇರುವ ಅನೇಕ ವೃತ್ತಿಪ್ರವೃತ್ತಿಗಳಲ್ಲಿ ಶ್ರೇಷ್ಠವಾದದ್ದು ಯಾವುದು, ಸಾಧಾರಣವಾದದ್ದು ಯಾವುದು, ತೀರ ಕಳಪೆ ಯಾವುದು ಎಂಬ ತಿಳುವಳಿಕೆ ಬೆಳೆದು, ಇವುಗಳಲ್ಲಿ ಯಾವುದನ್ನೂ ಬಹಿಷ್ಕರಿಸದೆ, ಮನ್ನಾ ಮಾಡಲು ಯತ್ನಿಸದೆ, ಪ್ರತಿಯೊಂದನ್ನು ಅದರದರ ಅಂತಸ್ತಿನಲ್ಲಿಡಲು ಶಕ್ತವಾಗುವ ಜೀವನಮೌಲ್ಯಗಳ ನಿಷ್ಕೃಷ್ಟ ವಿವೇಕ ಎಲ್ಲ ಕಾಲದಲ್ಲೂ ಎಲ್ಲ ಸಮಾಜಕ್ಕೂ ಸಲ್ಲುವ ಅಭಿವೃದ್ಧಿ ಸೂತ್ರ.

ಆದ್ದರಿಂದಲೇ ಈಗ, ಪುರಾತನ ಮೌಲ್ಯಗಳು ಖಿಲವಾಗಿ ಶಿಥಿಲಗೊಂಡಿರುವ ಈ ಕಾಲದಲ್ಲಿ ಬುದ್ಧಿಯನ್ನುಪಯೋಗಿಸಿ ಕೆಲಸ ಮಾಡುವ ಪ್ರತಿಯೊಬ್ಬನೂ ಕೈಕೊಳ್ಳಬೇಕಾದ ಅತ್ಯಂತ ತುರ್ತಿನ ಕೆಲಸ ಇದು: ನಿರಂತರವೂ ತೀವ್ರವೂ ಆದ ಪುರುಷಾರ್ಥ ಸಂಶೋಧನೆಯ ಮೂಲಕ ರೂಪುಗೊಳ್ಳುವ ಶ್ರೇಷ್ಠತೆಯ ಕಲ್ಪನೆಯ ಅಭಿವ್ಯಕ್ತಿ. ಈ ಕೆಲಸ ಕೇವಲ ಆತ್ಮಕ್ಕೆ ಪರಮಾರ್ಥಕ್ಕೆ ಸಂಬಂಧಪಟ್ಟದ್ದಲ್ಲ ಎಂಬುದು ಬಹು ಮುಖ್ಯವಾದ ಮಾತು. ಇಲ್ಲಿ ಈ ಲೋಕದ ಸಂಪತ್ಸುಖಗಳ ಅಭ್ಯುದಯಕ್ಕೂ ಅಗತ್ಯವಾದದ್ದು. ಇಂಥ ಕೆಲಸವನ್ನು ಕೈಕೊಳ್ಳುವ ಆಧುನಿಕ ಋಷಿ ಮುನಿಗಳ ತಂಡವೊಂದು ಆದಷ್ಟು ಬೇಗ ನಮ್ಮ ದೇಶದಲ್ಲಿ ಸಿದ್ಧವಾಗಿ ಕಾರ್ಯಪ್ರವೃತ್ತವಾಗದಿದ್ದರೆ ನಮ್ಮ ದೇಶ ಮತ್ತೆ ತಲೆಯೆತ್ತಲು ಅನೇಕ ಶತಮಾನಗಳೇ ಬೇಕಾಗಬಹುದು.

ಜೀವನಕ್ಕೆ ಅತ್ಯಂತ ನಿಕಟವರ್ತಿಯಾದ ಸಾಹಿತ್ಯದಲ್ಲಿ ಈ ಕೆಲಸ ನಡೆಯುತ್ತಿರುವುದೂ ನಡೆಯಬೇಕಾದ್ದೂ ಸಹಜ. ಅಸ್ಥಿರ ಸಮಾಜದಲ್ಲಿ ಕಾರ್ಯಶೀಲವಾಗಬೇಕಾದಾಗ ಸಾಹಿತ್ಯಕ್ಕೊಂದು ಅಭೂತಪೂರ್ವವಾದ ಜವಾಬ್ದಾರಿ ಬರುತ್ತದೆ, ಹೆಚ್ಚುತ್ತದೆ. ಎಲ್ಲ ಕಾಲಕ್ಕೂ ಸಲ್ಲುವ ಶ್ರೇಷ್ಠತೆಯ ಕಲ್ಪನೆಯನ್ನು ಈ ಕಾಲಕ್ಕೆ ಸಲ್ಲುವ ಪ್ರತಿಮೆಯಿಂದಾಗಿ ಕೆತ್ತುವ ಕೆಲಸ ಇದು. ಈ ಕೆಲಸ ನಡೆಯುತ್ತಿರುವಾಗಲೇ ಅದರ ಜೊತೆ ಜೊತೆಗೇ ಅದರ ಬೆಲೆ ಕಟ್ಟುವ, ಶ್ರೇಷ್ಠತೆಯ ಕಲ್ಪನೆಗೂ ಅದು ಅಭಿವ್ಯಕ್ತಗೊಳ್ಳುವ ಸಾಹಿತ್ಯ ಕೃತಿಗಳಿಗೂ ಇರುವ ಸಾಮೀಪ್ಯವನ್ನು ದೂರವನ್ನೂ ಗುರುತಿಸಿ ವಿವರಿಸಬಲ್ಲ ನಿಷ್ಪಕ್ಷಪಾತ, ನಿರ್ಮತ್ಸರ ವಿಮರ್ಶೆಯ ಕೆಲಸವೂ ನಡೆಯಬೇಕು. ಹೀಗೆ ಈಗ ಕೃತಿ, ವಿಮರ್ಶೆ–ಇವು ಒಂದಕ್ಕೊಂದು ಸಹವರ್ತಿಗಳಾಗಿ

ಸಹಕಾರಿಗಳಾಗಿ ಕೆಲಸ ಮಾಡದೆ ಬೇರೆ ದಾರಿ ಇಲ್ಲ. ಶ್ರೇಷ್ಠತೆಯ ಕಲ್ಪನೆ ಜನಸಮುದಾಯವನ್ನು ಮುಟ್ಟಿ ಸಮಾಜದ ಮನಸ್ಸಿನ ಸತ್ವವಾಗಿ ಮಾರ್ಪಡಬೇಕಾದರೆ ಇರುವ ಮಾರ್ಗ ಇದೊಂದೇ.

1972

(ಕೃಪೆ : ಸಾಕ್ಷಿಪ್ರಜ್ಞೆ)

## ಅಡಿಗರ ನುಡಿ

ಇರುವೆಲ್ಲವನ್ನು ಎಲ್ಲ ಜನಕೆ ತೆರವಾಗಿಸುವ
ಸಮಾಬಗೆಯ ಸಮಸುಖದ ಸಮದುಃಖದ
ಸಾಮರಸ್ಯದ ಸಾಮಗಾನ ಲಹರಿಯ ಮೇಲೆ
ತೇಲಿ ಬರಲಿದೆ ನೋಡು ನಮ್ಮ ನಾಡು.

★★★

ಆಗುವುದಿಷ್ಟು. ಆಗಬೇಕೆಂದಿರುವುದರ ರವಷ್ಟು

★★★

ಹುತ್ತಗಟ್ಟದೆ ಚಿತ್ತ ಮತ್ತೆ ಕೆತ್ತೀತೇನು?
ಪುರುಷೋತ್ತಮನ ಆ ಅಂಥ ರೂಪರೇಖೆ?

★★★

ದೊಡ್ಡ ದೊಡ್ಡ ಮಾತಿನ ಬೆಲೂನು ಓಗ್ಗುವಾಗ್ಗೆಲ್ಲ
ತಾಗಿಸು ನಿಜದ ಸೂಜಿಮೊನೆ

★★★

# ಒಳ್ಳೆತನ ಸಹಜವೇನಲ್ಲ; ಒಳ್ಳೆತನ ಅಸಹಜವೂ ಅಲ್ಲ

**-ಡಾ. ಯು. ಆರ್. ಅನಂತಮೂರ್ತಿ**

ಸಾಹಿತ್ಯದಲ್ಲಿ ಸ್ವೀಕರಿಸುವ ಕಾಲದಂತೆ ನಿರಾಕರಿಸುವ ಕಾಲವೂ ಇರುತ್ತದೆ. ಕುವೆಂಪು, ಬೇಂದ್ರೆ, ಪುತಿನರ ಕಾಲ ಸ್ವೀಕಾರದ ಕಾಲ. ಭಾರತದ ನವ ನಿರ್ಮಾಣದ ಕಾಲದಲ್ಲಿ ಪ್ರಾಚೀನ ಭಾರತದಿಂದಲೂ ಆಧುನಿಕ ಯುರೋಪಿನಿಂದಲೂ ನಮ್ಮ ಲೇಖಕರು ತಮಗೆ ಬೇಕಾದ್ದನ್ನು ಸ್ವೀಕರಿಸಿದರು. ಪಡೆದದ್ದನ್ನು ಕನ್ನಡಿಸಿದರು. ಇದು ಹಿಗ್ಗುತ್ತ ಹೋದ ಕಾಲ, ಹಿಗ್ಗುವುದಕ್ಕಿರುವ ಎರಡು ಅರ್ಥದಲ್ಲೂ.

ಇವರಲ್ಲಿ ಭಾವುಕರೂ ಚಿಂತನಶೀಲರೂ ಆದವರು ಆತ್ಮೋನ್ನತಿಗಾಗಿ, ಸಮಾಜಸುಧಾರಣೆಗಾಗಿ ಹಿಗ್ಗಿದವರು; ಕನ್ನಡಭಾಷೆಯ ಎಲ್ಲ ಸಾಧ್ಯತೆಗಳನ್ನು ಹುಡುಕುವುದಕ್ಕಾಗಿ ಹಿಗ್ಗಿದವರು. ತಾವೇ ಹುರಿದುಂಬಿಸಿದವರು; ಓದಗರನ್ನು ಹುರಿದುಂಬಿಸಿದವರು. ಹುರಿದುಂಬಿಸುವ ಮಾತಿನ ಓಘ ಉತ್ಕರ್ಷಗಳಿಗೆ ಅವರ ಬಾಳಿನಿಂದಲೇ, ಕಾಲದಿಂದಲೇ ನೈಜತೆಯೂ ಯಥಾರ್ಥಗೊಳ್ಳುವ ಅಧಿಕೃತತೆಯೂ ಒದಗುತ್ತಿತ್ತು.

ಆದರೆ ಭಾರತ ಸ್ವತಂತ್ರವಾದ ನಂತರ ಹೀಗೆ ಮಾತನಾಡುವುದು ಹವ್ಯಾಸವಾಯಿತು; ಸುಲಭ ಲಭ್ಯವಾಯಿತು; ಜನರನ್ನು ಮೆಚ್ಚಿಸುವ ಉಪಾಯವಾಯಿತು. ರಾಜಕಾರಣದಲ್ಲಿ ಹುಸಿ ಜನಪ್ರಿಯತೆಗಾಗಿ ಹಾಕುವ ಸೋಗಾಯಿತು. ಒಮ್ಮೆ ನಾನು ಒಂದು ಸಭೆಯಲ್ಲಿ 'ಈಗ ನಾವೇನಾದರೂ ದೇಶ ಪ್ರೇಮದ ಮೇಲೆ ಬರೆದರೆ ಅದು ನೈಜವೆನ್ನಿಸುವುದಿಲ್ಲ' ಎಂದೆ. ಸಭೆಯಲ್ಲಿ ಕೂತಿದ್ದ ರಂಶ್ರೀ ಮುಗಳಿಯವರು ಕುಪಿತರಾಗಿ ಎದ್ದು 'ದೇಶಪ್ರೇಮ ಹುಸಿ ಎನ್ನುತ್ತೀರ?' ಎಂದರು. ಆಗ ಅವರ ಪಕ್ಕವೇ ಕೂತಿದ್ದ ಮಾಸ್ತಿ ಎದ್ದು ಹೇಳಿದರು: 'ದೇಶಪ್ರೇಮ ಹುಸಿಯೆಂದು ಹೇಳಿದ್ದಲ್ಲ ; ಯಾಕದನ್ನು ನೈಜವೆನ್ನಿಸುವಂತೆ ಮಾಡಲು ಲೇಖಕರಿಗೆ ಆಗುತ್ತಿಲ್ಲ ಎಂದು ಕೇಳಿದ ಪ್ರಶ್ನೆ ಮುಖ್ಯ'. ಅವರ ವಾರಿಗೆಯವರಲ್ಲೆಲ್ಲ ಮಾತಿನ ಪ್ರಾಮಾಣಿಕತೆಗೂ ಇಳಿದನಿಗೂ ಹೆಚ್ಚು ಬೆಲೆಕೊಡುತ್ತಿದ್ದ, ಅಬ್ಬರದ ಮಾತಿಗೆ ನಾಚುತ್ತಿದ್ದ ಮಾಸ್ತಿ ಮಾತ್ರ ಇದನ್ನು ಹೇಳಬಲ್ಲವರಾಗಿದ್ದರು.

★★★

ಆತ್ಮೋನ್ನತಿಯ ಮಾತಿನ ರೆಟರಿಕ್‌ನಲ್ಲಿ ಆತ್ಮ ಪರೀಕ್ಷೆಗೇ ಅವಕಾಶವಿಲ್ಲದೇ ಹೋದದ್ದು ಆಕಾಶರಾಯರೆಂದು ನಾವು ತಮಾಷೆ ಮಾಡುತ್ತಿದ್ದ ಹಲವು ಕವಿಗಳ ಸೃಷ್ಟಿಗೆ ಕಾರಣವಾಯಿತು. ಸತತ ಆತ್ಮ ಪರೀಕ್ಷೆಯ ಗಾಂಧಿ ಮಾಯವಾಗಿ ಸತತ ಆತ್ಮವಿಕಾಸದ, ಔನ್ನತ್ಯದ ಅರವಿಂದರು ಮುಖ್ಯರಾದರು, ನಮ್ಮ ಮುಖ್ಯ ಕವಿಗಳಿಗೆ ಕೂಡ. ಇದಕ್ಕೆ ವಿರೋಧವಾಗಿ ಬೆವರುವ ಈ ದೇಹದ ಅಗತ್ಯವಿಲ್ಲದೆ ಒಂದು ಆತ್ಮ ತನ್ನಷ್ಟಕ್ಕೆ ತಾನೇ ಮಾತಾಡಲು ತೊಡಗಿದ್ದೇ ಆದರೆ ನಾನು ಬೆಚ್ಚಿಬೀಳುತ್ತೇನೆ ಎಂದು ಅಡಿಗರು ಒಮ್ಮೆ ಮೈಸೂರಿನ ಸಭೆಯೊಂದರಲ್ಲಿ ಹೇಳಿದ್ದು ನೆನಪಾಗುತ್ತದೆ.

★★★

ಆ ಕಾಲದ ಕನ್ನಡದಲ್ಲಿ ಆದ ಬದಲಾವಣೆಯ ಮುಖ್ಯ ಸ್ವರೂಪವೇನು? ಅದು ಭಾಷೆಯ ಪ್ರಯೋಗಕ್ಕೂ ಮನಸ್ಸಿಗೂ ಇರುವ ಸಂಬಂಧಕ್ಕೆ ಸೇರಿದ್ದು; ಕೇವಲ ಬೌದ್ಧಿಕವಾದ ತಿಳುವಳಿಕೆಗೂ, ಈ ತಿಳುವಳಿಕೆ ಅನುಭವದಲ್ಲಿ ಅಧಿಕೃತಗೊಳ್ಳುವ ಸಾಹಿತ್ಯದ ಜೀವಂತಿಕೆಗೂ ಸಂಬಂಧಿಸಿದ್ದು.

ಸ್ವೀಕಾರದಿಂದ ಹಿಗ್ಗುವುದರ ಬದಲಾಗಿ, ಮನುಷ್ಯ ಮತ್ತೆ ಜೀವಂತವಾಗಲು ತನ್ನಲ್ಲಿ ಕಡವಾಗಿ ಪಡೆದು ಬಂದದ್ದನ್ನು ನಿರಾಕರಿಸುವ, ಅನುಮಾನಿಸುವ ಧೈರ್ಯವನ್ನು ತೋರಬೇಕೆಂಬುದೇ ಆಗ ಆದ ಬದಲಾವಣೆ.

ಅಧಿಕೃತವೆನ್ನಿಸುವಂತೆ ಪ್ರಾಮಾಣಿಕವಾಗಿ ಸ್ವಾನುಭವದ ನಿಕಷದಲ್ಲಿ ಪರೀಕ್ಷಿಸಿ ಮಾತಾಡಬೇಕು, ಈ ಮಾತಿಗೆ ತಕ್ಕ ಲಯವನ್ನೂ ವಿಲಾಸವಾಗದ ವಾಗರ್ಥ ಪ್ರತಿಪತ್ತಿಯನ್ನೂ ವಾಕ್-ಶುದ್ಧಿಯ ಹೊಸ ವಾಕ್ ರಚನೆಗಳನ್ನೂ ಹುಡುಕಬೇಕು - ಇದು ಕೆಲವು ಲೇಖಕರು ಕೈಗೊಂಡ ವ್ರತವಾಯಿತು. ಇವರಲ್ಲಿ ಮುಖ್ಯರು ಅಡಿಗರು.

ಅಡಿಗರಂತೆ ಸತ್ತು ಮರುಹುಟ್ಟು ಪಡೆದ ಕನ್ನಡದ ಕವಿ ಇನ್ನೊಬ್ಬನಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ತಾನು ಪಡೆದಿದ್ದ ಮಾತಿನ ಗೇಯತೆಯನ್ನೂ ಇದರಿಂದ ಪಡೆದಿದ್ದ ಜನಾನುರಾಗವನ್ನೂ ತನ್ನ ಆವರೆಗಿನ ಒಟ್ಟು ವಾಕ್ ಸಿದ್ಧಿಯನ್ನೂ ನಿರಾಕರಿಸಿ ಅವರು ತನಗೇ ಹೊಸಬರಾದರು. 'ನಡೆದು ಬಂದ ದಾರಿಯೆಡೆಗೆ ತಿರುಗಿಸಬೇಡ/ ಕಣ್ಣಹೊರಳಿಸಬೇಡ' ಎಂದು ನಿರ್ಧರಿಸಿದವರು. ಒಣಗಿ ಬೀಜವಾಗಿ ನೆಲಕ್ಕುದುರಿ ಮಣ್ಣಿನ 'ಸಹಿಷ್ಣು ಕತ್ತಲಿನಲ್ಲಿ' ಕಾದಿರಬೇಕು - ಇದು ಅಡಿಗರದೇ ರೂಪಕ; ಗಂಗಾಧರ ಚಿತ್ತಾಲರು ಅಡಿಗರ ಈ ಮಾತು ತನ್ನನ್ನು ಹೇಗೆ ಚಕಿತಗೊಳಿಸಿ ಎಚ್ಚರಿಸಿತು ಎಂದದ್ದು ನೆನಪಾಗುತ್ತದೆ. ಜೈವಿಕ ಕ್ರಿಯೆಯಲ್ಲಿ ಸದಾ 'ಆಗುತ್ತ' ಹೋಗುವ, ಘೋಷಣೆಯಾಗದೆ 'ಸಂಕಲ್ಪಬಲದ

ಜಾಗರಣೆ' ಯಾಗುವ, 'ಹಣ್ಣು ತಿನ್ನದ ಅಪೂರ್ವ ಹಕ್ಕಿ' ಬರುವುದಕ್ಕೆ ಕಾಯುತ್ತ 'ಕದವಿರದೆ ಅಲುಗಾಡುವ' ಮರದ ಕೊಂಬೆಯಾಗುವ ವ್ರತ ಅಡಿಗರ ಕಾವ್ಯದ್ದು. ಉಪನಿಷತ್ತಿನ ಪಿಪ್ಪಲ ಮರದಲ್ಲಿ ('ದ್ವಾ ಸುಪರ್ಣಾ) ಒಂದು ಹಕ್ಕಿ ಹಣ್ಣನ್ನು ತಿಂದು ಅನುಭವಿಸುತ್ತದೆ; ಇನ್ನೊಂದು 'ಅಪೂರ್ವ ಹಕ್ಕಿ' ಸಾಕ್ಷಿಯಾಗಿ ಕಂಡು ಅನುಭವಿಸುತ್ತದೆ. ಅದರ ಬರವಿಗೆ ಕಾಯುತ್ತ, 'ಗೃಹಸ್ಥ ಧರ್ಮದ ಗಂಧ' ತನ್ನ ನಿತ್ಯ ಕರ್ಮದ ದೈನಿಕದಲ್ಲಿ ವಾಸನಾಭರಿತವಾಗಿ ಉಳಿದಿದ್ದೇ ತೇಯುತ್ತದೆ.

ಅವರು ಸತ್ತು ಹುಟ್ಟಿದ ಬಗೆ ಯೇಟ್ಸ್‌ನದು ಆದರೆ ಯೇಟ್ಸ್‌ನಲ್ಲಿ ನಾವು ಕಾಣುವಂತಹ ಚಪಲ ಚಂಚಲ ಶ್ರೀಮಂತಿಕೆಯಾಗಲೀ, ಅಪಾರವಾದ ವಿದಗ್ಧವಾದ ಜೀವಾನಾನುಭವವಾಗಲೀ ಅಡಿಗರ ವಸ್ತುವಲ್ಲ. ಅವರು ತಮ್ಮ ಮನೋಭೂಮಿಕೆಯನ್ನು ಎಲಿಯಟ್‌ನಿಂದ ರೂಪಿಸಿಕೊಂಡವರು. ಆದರೆ ಎಲಿಯಟ್ ಅಕಾಲ ವೃದ್ಧನಂತೆ ಬರೆದವನು; ಹುಟ್ಟಿದಾಗಲೇ ತನಗೆ ನಲವತ್ತು ವರ್ಷವೆನ್ನುವಂತೆ ಎಲಿಯಟ್ ಬರೆಯುವುದು.

ಮಾತು ಸತ್ಯವಾಗುವುದು ಹೇಗೆಂದು ಅಡಿಗರು ಯೋಚಿಸಿದ್ದೇ ನಮಗೆ ಆ ದಿನಗಳಲ್ಲಿ ಮುಖ್ಯವಾದದ್ದು. ಮಾತಿನಲ್ಲಿ ಇದು ಸಾಚ ಇದು ಮೋಸ ಎಂದು ಹೇಳುವುದು ಬಡಪಾಯಿ ಕಿವಿಗಲ್ಲ ಸುಲಭ: ಮಿಂಚುತಂತಿ ಕಾಣುವುದಕ್ಕೆ ಬರೆ ತಂತಿ; ಆದರೆ ಮುಟ್ಟಿ ಒದೆಸಿಕೊಂಡಾಗ ಅದರ ನಿಜ ತಿಳಿಯುತ್ತದೆ. ಮಾತು ಇರಬೇಕಾದ್ದು ಮಿಂಚು ತಂತಿಯ ಹಾಗೆ - ಇದು ಅಡಿಗರ ಮತ. ವಾಗ್ಮಿಯಾದ ರಾಜಕಾರಣಿ ತನ್ನ ನೆರೆಯವನನ್ನು ಮೋಸಮಾಡಲು ಯತ್ನಿಸಿದರೆ, ಭಾವಾತಿರೇಕದ ಲಂಪಟ ಕವಿ ತನ್ನನ್ನೇ ವಂಚಿಸಿಕೊಳ್ಳುತ್ತಾನೆ. ಆದ್ದರಿಂದ ಓದಗನನ್ನು ಪುಸಲಾಯಿಸುವ ಉದ್ದೇಶದ ಮಾತುಗಾರಿಕೆಯನ್ನು ಅಡಿಗರು ತ್ಯಜಿಸಿದರು; ಅಧ್ಯಯನಶೀಲನಾದ ಓದುಗ ತನ್ನ ಬರವಣಿಗೆಗೆ ಒದಗಿ ಬರುವಂತೆ ಪ್ರೇರೇಪಿಸುವ 'ಉಪಾಯ'ವಾಗಿ ಕಾವ್ಯ ರಚನೆ ಮಾಡಿದರು.

ಮಾತಿನ ಬಗ್ಗೆ ಅಡಿಗರು ಎತ್ತಿದ ಅನುಮಾನಗಳಿಗೂ ಆ ಕಾಲದ ರಾಜಕೀಯಕ್ಕೂ ಹಲವು ಸಂಬಂಧಗಳಿವೆ. ''ನೆಹರು ನಿವೃತ್ತರಾಗುವುದಿಲ್ಲ'' ಎನ್ನುವ ವ್ಯಂಗ್ಯದ ಪದ್ಯದಲ್ಲಿ ಅಡಿಗರು ಇದನ್ನು ಸೂಚಿಸುತ್ತಾರೆ. ಈ ಪದ್ಯ ಬಂದಾಗ ಅದು ಎಷ್ಟು ಶಾಕಿಂಗ್ ಆಗಿ ಇತ್ತೆಂದರೆ ಹಿರಿಯ ವಿಮರ್ಶಕ ಕುರ್ತಕೋಟಿ ಕೂಡಾ ನೆಹರು ಬಗ್ಗೆ ಹೀಗೆಲ್ಲಾ ಬರೆಯಬಾರದು ಎಂದಿದ್ದರು. 'ಹೊತ್ತು ಸುತ್ತುತ್ತಾನೆ ಬಲು ಭಾರೀ ಭೂಗೋಳ/

ಗಂಟೆಗೆ ಎಂಬತ್ತೆಂಟು ಮೈಲಿ ಸ್ಪಗತ್ -- ತನ್ನ ಮಾತಿಗೆ ತಾನೇ ಮೋಹಿತನಾದ ನಾರ್ಸಿಸಸ್ ಆಗಿ ನೆಹರು ನಮಗೆ ತೋರುತ್ತಾರೆ. ಟ್ಯಾಗೋರ್‌ರನ್ನು ಅಡಿಗರು ಹೀಗೆಯೇ ಅಣಕಿಸುತ್ತಾರೆ. ಆದರೆ ಹೀಗೆ ವ್ಯಂಗ್ಯವಾಡುವಾಗ ಅಡಿಗರು ಹಿಂದೆ ತಾನೇ ಏನಾಗಿದ್ದೆನೋ ಅದನ್ನೇ ಗೇಲಿ ಮಾಡಿಕೊಳ್ಳುತ್ತಿದ್ದಾರೆ ಎಂಬುದನ್ನು ಮರೆಯಬಾರದು. ಕೆಲವೊಮ್ಮೆ ತನ್ನನ್ನೇ ತಾನು ಹಾಸ್ಯ ಮಾಡಿಕೊಳ್ಳುವ ಕೋಡಂಗಿಯಂತೆಯೂ ಅವರು ನಮಗೆ ಎದುರಾಗುತ್ತಾರೆ.

ಕೃಷ್ಣ ಮೆನನ್‌ರು ವಿಶ್ವ ಸಂಸ್ಥೆಯಲ್ಲಿ ದಣಿವಿಲ್ಲದೇ ಗಂಟೆಗಟ್ಟಳೆ ಕಾಶ್ಮೀರದ ಭಾರತದ ನೀತಿಯನ್ನು ಕುರಿತು ಮಾಡಿದ ಭಾಷಣದಿಂದ ಅಡಿಗರು ಕೆಂಡವಾಗಿದ್ದರು ಎಂಬುದು ನೆನಪಾಗುತ್ತದೆ. ಅವರು ಉಡುಪಿಯಲ್ಲಿ ಪ್ರಿನ್ಸಿಪಾಲರಾಗಿದ್ದಾಗ ಆಡಿದ ಒಂದು ಮಾತು ದಕ್ಷಿಣ ಕನ್ನಡ ಜಿಲ್ಲೆಯ ಹಲವರನ್ನು ಕೋಪಗ್ರಸ್ತರಾಗುವಂತೆ ಮಾಡಿತ್ತು. ಅಡಿಗರು ಹೇಳಿದ್ದು ಇಷ್ಟೇ: 'ದಕ್ಷಿಣ ಕನ್ನಡ ಜಿಲ್ಲೆಯ ಜನ ಮಹಾ ಮಾತುಗಾರರು, ಅವರ ಮಾತಿನ ಬಿಂಕ, ಬಿನ್ನಾಣ, ಸೇಳೆ, ಆರ್ಭಟ ಎಲ್ಲವೂ ತಾಳ ಮದ್ದಳೆಯಿಂದ ಅವರಿಗೆ ಅಭ್ಯಾಸವಾದದು. ಹೀಗಾಗಿ ಈ ಜನರಿಗೆ ಸತ್ಯವಾಗಿ ಏನನ್ನಾದರೂ ಅನ್ನಿಸಿದಂತೆ ಹೇಳುವುದು ಹೇಗೆಂದು ಮರೆತೇ ಹೋಗಿದೆ'.

ಅಡಿಗರೂ ಕೆಲವು ಪದ್ಯಗಳಲ್ಲಿ ಯಕ್ಷಗಾನದ ಒಂದು ವೇಷವೇ. ಆದರೆ ತಾನು ವೇಷ ಹಾಕಿಕೊಂಡಿದ್ದೇನೆಂದು ಪ್ರಜ್ಞಾಪೂರ್ವಕವಾಗಿ ನಮ್ಮೆದುರು ಅವರು ನಿಲ್ಲುವುದು, ಅವರ ಕಾವ್ಯದ ಭಾವಾಭಿನಯದ ನಾಟಕೀಯತೆಗಾಗಿ ಎಂದು ನನ್ನ ಗ್ರಹಿಕೆ. ಇದಕ್ಕೆ ಉತ್ತಮ ಉದಾಹರಣೆ ಅವರ 'ಗೊಂದಲಪುರ'.

ನೆಹರು, ಕೃಷ್ಣ ಮೆನನ್ - ಈ ಬಗೆಯ ಸಮಾಜವಾದೀ ವಾಕ್ಚತುರ ರಾಜಕಾರಣವನ್ನು ಅಡಿಗರು ವಿರೋಧಿಸುತ್ತಲೇ ಮೊದಲು ರಾಜಾಜಿಯವರ ಸ್ವತಂತ್ರ ಪಕ್ಷಕ್ಕೂ ಆಮೇಲೆ ಕಾಂಗ್ರೆಸ್ಸೇತರ ರಾಜಕಾರಣದ ಅಡಿಯಲ್ಲಿ ಜನಸಂಘಕ್ಕೂ ಹತ್ತಿರವಾದರು. ಬೆಂಗಳೂರಿನಲ್ಲಿ ಜನಸಂಘದಿಂದ ಚುನಾವಣೆಗೂ ನಿಂತರು. ಆಗ ನಾನು ವಿರೋಧಿಸಿದೆ; ಆದರೆ ಅಡಿಗರ ಮೇಲಿನ ಪ್ರೀತಿಯನ್ನು ಉಳಿಸಿಕೊಂಡೆ. ಲಂಕೇಶರು ಸಕ್ರಿಯವಾಗಿ ಅಡಿಗರಿಗೆ ಚುನಾವಣೆಯಲ್ಲಿ ನೆರವಾದರು; ಆದರೆ ನಂತರ ಹಲವು ಭಿನ್ನಾಭಿಪ್ರಾಯಗಳಲ್ಲಿ ಅವರಿಂದ ದೂರವಾದರು.

ಅಡಿಗರು ಆರ್‌ಎಸ್‌ಎಸ್‌ನ ಶಿಸ್ತು ಸಂಯಮಗಳನ್ನು ಮೆಚ್ಚಿಕೊಂಡಿದ್ದರು. ಆದರೆ ಸಂಘದವರು ಅಡಿಗರ ಒಳದನಿಗಳನ್ನು ಆಲಿಸಬಲ್ಲವರಾಗಿರಲಿಲ್ಲ. ಎಂದೇ ನನ್ನ

ಅನುಮಾನ. ಒಮ್ಮೆ ದೇವರಸ್ ಬಂದಾಗ ಅಡಿಗರು ರೈಲ್ವೇ ನಿಲ್ದಾಣಕ್ಕೆ ಹೋಗಿ ಅವರನ್ನು ಬರಮಾಡಿಕೊಳ್ಳಬೇಕು ಎಂದು ಸಂಘದವರು ಕೇಳಿದಾಗ ಅಡಿಗರು ಕೊಟ್ಟ ಉತ್ತರ ಇದು: 'ದೇವರಸ್ ನಾನು ಗೌರವಿಸುವ ನಾಯಕರು. ನಮ್ಮ ಮನೆಗೇ ಬಂದು ನನ್ನನ್ನು ನೋಡಲಿ. ಆದರೆ ಜಯಪ್ರಕಾಶ್ ನಾರಾಯಣ್‌ರು ಬಂದಿದ್ದರೆ ನಾನೇ ಹೋಗಿ ನೋಡುತ್ತಿದ್ದೆ.'

ಅಡಿಗರನ್ನು ಆ ದಿನಗಳಲ್ಲಿ ನಾನು ಕನ್ಸರ್ವೇಟಿವ್ ಎಂದು ತಿಳಿದಿದ್ದೆ. ಇಂಗ್ಲಿಷ್‌ನ ಈ ಶಬ್ದಕ್ಕೆ ಸಮರ್ಪಕವಾದ ಕನ್ನಡ ಶಬ್ದ ನನಗೆ ಹೊಳೆಯುತ್ತಿಲ್ಲ. ಹತ್ತೊಂಬತ್ತನೇ ಶತಮಾನದ ಜಾನ್ ಸ್ಟುವರ್ಟ್ ಮಿಲ್ ಉದಾರವಾದಿಯಾದ ಸಾಮಾಜಿಕ ಚಿಂತಕ. ಆದರೆ ತನ್ನನ್ನು ಕಣ್ಣು ಮುಚ್ಚಿ ಅನುಸರಿಸುವ ಶಿಷ್ಯರು ತನಗೆ ತದ್ವಿರುದ್ಧವಾಗಿ ಯೋಚಿಸುವ ಕನ್ಸರ್ವೇಟಿವ್ ಮನಸ್ಸಿನ ಕೋಲ್‌ರಿಜ್‌ನ ವಿಚಾರಗಳಿಗೂ ಕಿವಿಗೊಡಬೇಕು; ಇಲ್ಲವಾದರೆ ಅವರ ಮನಸ್ಸು ಕುರುಡು ಉದಾರವಾದದಲ್ಲಿ ತೆಳುವಾಗಿಬಿಡಬಹುದು ಎಂದು ಹೇಳುತ್ತಿದ್ದನಂತೆ. ನಮಗೆ ಸಮಾಜವಾದೀ ಕನಸುಗಾರಿಕೆಯ ಆ ದಿನಗಳಲ್ಲಿ ಅಡಿಗರ ಕೆಲವು ವಿಚಾರಗಳು ಅಡ್ಡಗಾಲು ಹಾಕಿ ನಮ್ಮನ್ನು ತಡೆಯುತ್ತಿದ್ದ ಕ್ರಮ ನನಗಂತೂ ಮುಖ್ಯವೆನಿಸಿತ್ತು.

ವಾಲ್ಮೀಕಿ ಹುತ್ತಗಟ್ಟಿ ಕೂತಿದ್ದು ಋಷಿಯಾಗುತ್ತಾನೆ. ಹೀಗೆ ಹುತ್ತಗಟ್ಟದೆ ನಾವು ಪುರುಷೋತ್ತಮನನ್ನು ಮತ್ತೆ ಸೃಷ್ಟಿಸಲಾರೆವು ಎಂಬ ವ್ರತಶೀಲತೆಯಲ್ಲಿ ಅಡಿಗರಿಗೆ ನಂಬಿಕೆ ಇತ್ತು. ಸತತ ಹರಿಯುವ 'ಬತ್ತಲಾಗದ ಗಂಗೆ'ಯಿಂದ ನಾವು ಕ್ರಿಯಾಶೀಲರಾಗದೆ ಹೋಗಿದ್ದೇವೆ ಎಂಬ ಭಾರತೀಯ ಪರಂಪರೆಯ ಟೀಕೆಯೂ ಅವರ ಚಿಂತನೆಯಲ್ಲಿತ್ತು.:

ಬತ್ತಲಾರದ ಗಂಗೆಗೆಂಥ ಕುತ್ತಿದು, ನೋಡು
ಅದೇ ಪಾತ್ರ, ಅದೇ ಧಾಟಿ, ವಸ್ತುಗಳ ಪಾಳಿ;
ಹೊಸ ನೀರು ಬಂದರೂ ಅದೇ ಪುರಾತನದಮಲು,
ರಂಗಮಂದಿರ ಅದೇ, ನಾಟಕವೂ ಅದೇ.

ಇಡೀ ಜಗತ್ತಿಗೆ ಭಾರತ ಪಾಠ ಹೇಳಬಹುದೆಂಬ ನೆಹರೂಯುಗದ ಅಹಮಿಕೆಯನ್ನು ಅವರು ಟೀಕಿಸುತ್ತಿದ್ದರು. ಮೋಡ ನಿರಾಂತಕವಾಗಿ ಆಕಾಶದಲ್ಲಿ ಎಲ್ಲೆಲ್ಲೂ ಸಂಚರಿಸಬಹುದು. ಆದರೆ ಅದು ನೆಲಕ್ಕೆ ಇಳಿಯುವಾಗ ತನುರೂಪಿ ಬಿಂದು. ವಿಶ್ವಪ್ರಜ್ಞೆಯೆಂದರೆ ಏನು? ಪಡುಗಡಲ ಮೊರೆಯ ಬಾರುಗೋಲಿನ ಬೀಸಿಗೆ ಸಿಕ್ಕ ತನ್ನ ಬಾಲ್ಯದ ಮನೆಯ ಎದುರು ಒಂದು 'ಹಳಬ' ಹನೆಮರವಿದೆ; ಅಲ್ಲಿ ಬರುವ ಹಕ್ಕಿಗಳಿಗೆ

ಮಕ್ಕಳು ಖುಷಿಯಲ್ಲಿ ಬೆಳತಿಗೆ ಚೆಲ್ಲುತ್ತಾರೆ; ಅವನ್ನು ತಿನ್ನುವ ಹಕ್ಕಿಗಳ 'ಕುಟುಕು ಕುಟುಕಿನ ಸಫಲ ನಾಟ್ಯಕ್ಕೆ' ಮಕ್ಕಳು ಬೆರಗಾಗುತ್ತಾರೆ. (ಸಣ್ಣಗುಟುಕುಗಳಲ್ಲಿ ಆಹಾರ ಸ್ವೀಕರಿಸುತ್ತ ಸಾವಿನ ಸಮೀಪದಲ್ಲಿದ್ದ ಗೋಪಾಲಗೌಡರಿಗೆ ಬಹು ಪ್ರಿಯವಾದ ಪದಪುಂಜ ಇದು) ಹೀಗೆ 'ಪಾಚಿಗಟ್ಟಿ ಜಾರುವ ನಮ್ಮ ಬಳುಮಾಡಿಗೂ ಬಂದ ವಿಶ್ವ'ವೇ ನೈಜವಾದ ವಿಶ್ವ ಪ್ರಜ್ಞೆ. ಅಡಿಗರು ತಮ್ಮ ಅತ್ಯುತ್ತಮ ಕವನಗಳಲ್ಲಿ ಒಬ್ಬ ಉಗ್ಗನಂತೆ ಮಾತು ಹುಡುಕುತ್ತಾರೆ. 'ಶಬ್ದ ಸೂತಕದ' ಬಗ್ಗೆ ಪರಮ ಎಚ್ಚರದ ಅಲ್ಲಮನ ಕುಲದವರಾಗುತ್ತಾರೆ.

ಉದಾತ್ತವಾದ ಮಾತಿನಿಂದಲೇ, ವಿಚಾರಗಳಿಂದಲೇ ಮುದಗೊಳ್ಳುವ ಭಾರತೀಯ ಮನಸ್ಸನ್ನು ಅವರಷ್ಟು ಚುಚ್ಚಿ ಎಚ್ಚರಿಸಿದ ಲೇಖಕರು ಇನ್ನೊಬ್ಬರಿದ್ದರೆ ಅದು ಕಾರಂತರು.

ಕಪ್ಪೆ ಮಹತ್ತಿನ ತನ್ನ ಆಸೆಯಲ್ಲಿ ಎಲ್ಲೆಲ್ಲೂ ಕುಪ್ಪಳಿಸುತ್ತಿದ್ದು, ತನ್ನ ಮೈಯ ಹೊಳಪನ್ನು ಕಳೆದುಕೊಂಡಾಗ ಮತ್ತೆ ಕೆಸರಿನಲ್ಲಿ ಕೂತಿದ್ದು ತನ್ನ ಹೊಳಪನ್ನು ಪಡೆಯುತ್ತದೆ ಎಂಬುದು ಅವರಿಗೆ ಬಹಳ ಮುಖ್ಯ ಮೆಟಫರ್ ಆಯಿತು. ಕೂಪ ಮಂಡೂಕದ ಗ್ರಹೀತ ಅರ್ಥವೇ ಬದಲಾಗುವ ಐರನಿ ಇಲ್ಲಿದೆ.

★★★

ಬೌದ್ಧಿಕ ಸಂಕಟ ಎಂಬುದೊಂದು ಇದೆ. ಇಂಗ್ಲಿಷ್‌ನಲ್ಲಿ ಇದನ್ನು ಇಂಟಲೆಕ್ಚುಯಲ್ ಸಫರಿಂಗ್ ಎನ್ನುತ್ತಾರೆ. ನಮ್ಮ ಅನೇಕ ಚಿಂತಕರು ಸಾರಾ ಸಗಟಾಗಿ ತಮಗೆ ಹೊಳೆದದ್ದನ್ನು ಸಾರುತ್ತಲೇ ಇರುತ್ತಾರೆ. ಇದು ನನ್ನ ಪಾಲಿಗೆ ಎಷ್ಟು ನಿಜ, ಇದು ಅಂತರಂಗದ ವಿಚಾರವಾಗುವಂತೆ ಯಾವ ಧಾರಣೆಯಲ್ಲಿ ನಾನಿದನ್ನು ಬಗೆಹರಿಸಿಕೊಳ್ಳಬೇಕು ಎನ್ನುವ ಸಾವಧಾನವಿಲ್ಲದ, ಕಟ್ಟೆಚ್ಚರವಿಲ್ಲದ ಮಾತುಗಳೇ ಈಗ ಹೆಚ್ಚಾಗಿವೆ.

ನಮ್ಮ ಭವ್ಯ ಭಾವುಕ ವಿಚಾರಗಳೆಲ್ಲವೂ ಮನುಷ್ಯ ಒಳ್ಳೆಯವನು ಎಂದುಕೊಂಡು ಅವನ ದುಷ್ಟತನ ಕಾಣದಂತೆ ಕಣ್ಣು ಮುಚ್ಚಿ ಆಡುವ ಮಾತುಗಳಾಗುತ್ತವೆ; ಅಥವಾ ಮನುಷ್ಯ ಕೆಟ್ಟವನು ಎಂದು ತಿಳಿದೇ ಅವನನ್ನು ಕುಗ್ಗಿಸುವ ಕ್ರಮಗಳನ್ನು ವ್ಯವಸ್ಥೆಯಲ್ಲಿ ಹುಡುಕುವುದೇ ಆಗಿರುತ್ತದೆ. ಈ ಎರಡು ಬಗೆಯ ಆಲೋಚನೆಗಳೂ ಸತ್ಯಕ್ಕೆ ದೂರವೆಂದು ತಿಳಿದವನು ಅಡಿಗರಂತೆ ಮಾತಾನಾಡುತ್ತಾನೆ-

ಒಳ್ಳೆತನ ಸಹಜವೇನಲ್ಲ; ಸಹಜದೊಳಗಿನ ಕಿಡಿಗೆ
ಆಟವಾಡುವ ತಲುಬು ಮುಖ್ಯ; ರೂಪಾಂತರದ ಅಥವಾ

ಸಾಯದೆ ಸತ್ತು, ಹುಟ್ಟದೆ ಹುಟ್ಟಿ ಮತ್ತೆ ಮತ್ತೆ ಪುಟ್ಟಡಿಯಿಟ್ಟು
ಹಂತ ಹಂತಕ್ಕೆ ಜಿಗಿಯುವ ಗುಪ್ತ ತಾಖತ್ತಿನ ವಿಕಾಸದ ವಿಚಾರ.

.........

ಒಳ್ಳೆತನ ಅಸಹಜವೂ ಅಲ್ಲ, ಅದು ಬೆಳವಣಿಗೆಯ
ಸವಾಲು, ಬೀಜ, ಮೊಳಕೆ, ಎಲೆ, ಕೊಂಬೆ, ಮಿಡಿಗೊಂಚಲು-ಈ ಯಾವ
ಹಂತದಲ್ಲಿ ಕೊಡಲಿಯ ಕಾವು ಆಡಿತೋ; ಹುಳು ಹತ್ತಿ,
ಬಿರುಗಾಳಿ ಬಡಿದು, ನೀರಿಲ್ಲದೇ
ಆಡಗಿತೋ ದೀಪ-ತಿಳಿಯದು,

......

ಒಳ್ಳೆತನ ಸಹಜವೂ ಅಲ್ಲ, ಅಸಹಜವೂ ಅಲ್ಲ ಎಂದು ಏಕಕಾಲದಲ್ಲಿ ತಿಳಿದವನ ಚಿಂತನೆ ಇಲ್ಲಿದೆ. ಮಗುವನ್ನು ಪಾಲಿಸಿ ಬೆಳೆಸುವ ಶಿಕ್ಷಣ ವ್ಯವಸ್ಥೆಯಲ್ಲಿ ಮಾನವನ ಒಳ್ಳೆತನದ ಸಹಜತೆ/ಅಸಹಜತೆ ಎರಡೂ ನಮಗೆ ಗೊತ್ತಿರಬೇಕು. ರಾಜಕೀಯವಾಗಿ ಕಟ್ಟುವ ಸಾಮಾಜಿಕ ವ್ಯವಸ್ಥೆಯಲ್ಲೂ, ನಿತ್ಯ ಜೀವನದ ಸಂಬಂಧಗಳ ನಿರ್ವಹಣೆಯಲ್ಲೂ ಮನುಷ್ಯನ ಒಳ್ಳೆತನದ ಸಹಜತೆ/ಅಸಹಜತೆ- ಎರಡೂ ನಮಗೆ ಅರಿವಾಗಿರಬೇಕು. ಕೊನೆಯ ತೀರ್ಮಾನವಾಗದ ಯಾವ ವಿಷಯದಲ್ಲಿ, ಇದಕ್ಕೆ ಅವಶ್ಯವಾದ ಯಾವ ಸಂಕಟದಲ್ಲಿ ನಮ್ಮ ಬದುಕು ಅಧಿಕೃತವಾದ ಸತ್ಯವನ್ನು ಪಡೆಯುತ್ತದೆ ಎಂದು ಹುಡುಕುತ್ತಿದ್ದವರು ಅಡಿಗರು. ಭಯೋತ್ಪಾದಕ ಹಿಂಸಾಚಾರದಿಂದ ನಾವು ಮನುಷ್ಯನ ಸ್ವರೂಪದ ಬಗ್ಗೆಯೇ ಕಂಗೆಡುತ್ತಿರುವ ಈ ದಿನಗಳಲ್ಲಿ ಅಡಿಗರ ನಿಷ್ಠುರ ನಿಲುವುಗಳೂ, ಸತತವಾಗಿ 'ಆಗು'ತ್ತಲೇ ಇರುವ, ಮನುಷ್ಯನ ಅಹಂಕಾರದ ಆಚೆಗಿನ ಜೈವಿಕ ಕ್ರಿಯೆಯ ಬೆರಗೂ ನಮಗೆ ಅಗತ್ಯವಾಗಿ ಉಳಿದಿವೆ.

ಮಾತುಗಳೆಲ್ಲವೂ ತಮ್ಮ ಅರ್ಥಗಳನ್ನು ಕಳೆದುಕೊಳ್ಳುತ್ತಿರುವ ಹುಸಿ ಭಂಗಿಗಳ, ಹುಸಿ ಕನಸುಗಳ ಬಾಯಿ ಬಡುಕರೇ ಆಳುತ್ತಿರುವ ಈ ಕಾಲದಲ್ಲಿ ಅಡಿಗರ ಸ್ವಾನುಭವದ ವ್ರತ ನಮ್ಮ ಭಾಷೆಗೆ ಹೊಸ ಚೈತನ್ಯ ತಂದೀತೆ ಎಂಬ ಆತಂಕದಲ್ಲಿ ಇದನ್ನು ಬರೆದಿದ್ದೇನೆ.



# ಅಡಿಗರು ಹೇಳುವ 'ಗಾಳಿಯ ಶೀಲ'

- ಎಸ್. ಆರ್. ವಿಜಯಶಂಕರ

ಕವಿ ಗೋಪಾಲಕೃಷ್ಣ ಅಡಿಗರಿಗೆ ಪರಂಪರೆಯ ಜೊತೆ ಪ್ರಶ್ನೆ - ಪ್ರೇಮದ ನಂಟು. ಪರಂಪರೆಯ ಸಾತತ್ಯ ಅವರಿಗೆ ಪ್ರಶ್ನೆ ಪರಿಣಾಮಗಳ ಏಳು ಬೀಳು. ಅವರ 'ಪ್ರಾರ್ಥನೆ' 'ವರ್ಧಮಾನ' ಹಾಗೂ 'ಅಜ್ಜನೆಟ್ಟಾಲ' ಕವನಗಳನ್ನು ಒಟ್ಟಾಗಿ ಓದಿದರೆ ತ್ರಿಕಾಲಗಳಲ್ಲಿ - ವರ್ತಮಾನ, ಭೂತ, ಭವಿಷ್ಯತ್ - ಅವರು ಪರಂಪರೆಯ ಕ್ರಿಯಾಶಕ್ತಿಯನ್ನು ಅದರ ಅವಸಾನದ ಅನಿವಾರ್ಯತೆಯನ್ನೂ ಗ್ರಹಿಸುವುದನ್ನು ನೋಡಬಹುದು. ಅಪ್ಪ, ಮಗ, ಮೊಮ್ಮಗ ಹೀಗೆ ಮುಂದುವರಿವ ಪೀಳಿಗೆಯಲ್ಲಿ ಪರಂಪರೆಯ ಸಾವು, ಮರು ಹುಟ್ಟುಗಳ ಬೆಳವಣಿಗೆಯನ್ನು ಗುರುತಿಸುತ್ತಾರೆ.

ಪರಂಪರೆಯನ್ನು ಪ್ರಶ್ನೆಯ ಮೂಲಕ ಅರ್ಥ ಮಾಡಿಕೊಳ್ಳುವುದು ಅದರ ಜೊಳ್ಳನ್ನು ಕಳೆದು ಜಿತ್ತವನ್ನು ಉಳಿಸಿ ಕಾಣುವ ಅವರ ಶ್ರಮ. ಹೀಗೆ ಪ್ರಶ್ನಿಸುವ ಮತ್ತು ಸಾತತ್ಯದ ನೆಲೆಯನ್ನು ಸ್ವೀಕರಿಸುವ ಮನೋಭೂಮಿಕೆ ಅವರ ಚಿಂತನೆಯ ಮುಖ್ಯ ಎಳೆ. ನಿಷ್ಠುರ ಸತ್ಯಾನ್ವೇಷಣೆಗಾಗಿ ಅವರು ಪ್ರಶ್ನೆಗಳನ್ನು ಪ್ರಾಮಾಣಿಕವಾಗಿ ಕೇಳಿಕೊಂಡರು. ಭಾವದ ಅತಿ ಒತ್ತಡಗಳಿಂದ ಬಿಡುಗಡೆ ಪಡೆದು ವೈಚಾರಿಕ ಅರಿವನ್ನು ಕಾವ್ಯಾನುಭವವಾಗಿ ಕಟ್ಟಲು ತೊಡಗುವ ಕವಿಗೆ ಪರಂಪರೆ ಪ್ರಶ್ನಿಸುವ ಅಥವಾ ಪ್ರಶ್ನಿಸದೆ ಇರುವ ಸರಳ ಸೂತ್ರಗಳಾಗಿ ಉಳಿಯುವುದಿಲ್ಲ. ನಂಬುಗೆಯ ದೃಷ್ಟಿಯಿಂದ ಪ್ರಶ್ನಿಸಿದೆ ಒಪ್ಪಿಕೊಳ್ಳುವ ಮತ್ತು ವೈಚಾರಿಕವಾಗಿ ಪ್ರಶ್ನಿಸುವ ಸಂದಿಗ್ಧವನ್ನು ಅದು ಉಂಟು ಮಾಡುತ್ತದೆ. ವಿಚಾರಪರ ಚಿಂತನೆಯಿಂದ ಸೃಷ್ಟಿಯಾದ ಅಂತಹ ಸಂಕೀರ್ಣ ಅನುಭವವನ್ನು ಭಾಷೆಯಲ್ಲಿ ಹೇಗೆ ಸೃಷ್ಟಿಸುವುದು ಎಂಬ ಒತ್ತಡ ಅಡಿಗರಿಗೆ ಅವರ ನವೋದಯ ಕಾಲದ ಕವನಗಳಲ್ಲೆ ಬಹು ಸೂಕ್ಷ್ಮವಾಗಿ ಮೊಳಕೆಯೊಡೆಯುತ್ತಿತ್ತು.

ಅಂತಹ ಸಂಕೀರ್ಣ ಅನುಭವಗಳನ್ನು ಹೆಕ್ಕಿ ಹೆಣೆಯಲು ಅವರು ಭಾಷೆಯ ಎಲ್ಲಾ ಸಾಧ್ಯತೆಗಳನ್ನು ದುಡಿಸಿಕೊಳ್ಳಲು ಹವಣಿಸುತ್ತಿದ್ದರು. ಅಡಿಗರ ಮೊದಲ ಕವನ ಸಂಕಲನ 'ಭಾವ ತರಂಗ'ದಲ್ಲಿ ' ಇದು ಬಾಳು' ಎಂಬ ಕವನವೊಂದಿದೆ. 'ಅಳುವ ಕಡಲೊಳು ತೇಲಿ ಬರುತಲಿದೆ / ನಗೆಯ ಹಾಯಿ ದೋಣಿ' ಎಂದು ಪ್ರಾರಂಭವಾಗುವ ಈ ಕವನ ಕಾಳಿಂಗರಾಯರು ಮೊದಲಾದವರ ಗಾಯನಗಳಿಂದ ಬಹು ಜನಪ್ರಿಯವೂ ಆಗಿದೆ.

ಜನನ ಮರಣಗಳ ಉಬ್ಬು ತಗ್ಗು ಹೊರಳುರುಳುವಾಟದ ಈ ಬಾಳಿನಲ್ಲಿ ಇದನರಿತೆ ಎಂಬ ಭಾವ ಬಂದೊಡನೆ. ' ಆ ಅರಿವು ಕಿರಣವನೆ ನುಂಗಿತೊಂದು ಮೇಘ' ಆದರೆ ಪುನಃ ಅರಿವು ಕಿರಣವನ್ನು ನುಂಗಿದ ಮುಗಿಲಿನ ಬಸಿರಿನಿಂದ ಇನ್ನೊಂದು ಅಮೋಘವಾದ ಕಿರಣ ಹುಟ್ಟುತ್ತದೆ. ಏಕಸೂತ್ರ ಹಾಗೂ ಭಿನ್ನತೆಗಳ ವಿರೋಧಾಭಾಸಗಳಲ್ಲಿ ಬಳಲಿದ ಕಾವ್ಯ ನಾಯಕ ಇದು ಹೀಗೆ ಎಂಬ ನಂಬುಗೆಯ ಊರುಗೋಲು ಇನ್ನು ಇಲ್ಲ ಎಂಬ ಸ್ಥಿತಿಗೆ ತಲುಪುತ್ತಾನೆ. (ಬದುಕಿನಲ್ಲಿರುವ ಅನಿಶ್ಚಯತೆಯ ಸೂಚನೆಯೂ ಇದೆ.)

ದೇವರ ಲೀಲೆ ಅಥವಾ ಕಾಣದ ಕೈಯಾಗಿ ವಿಧಿಯೆಂಬ ಸೂತ್ರಧಾರ ನಡೆಸುವ ಈ ಲೋಕದಲ್ಲಿ ಇದು ಹೀಗೆ ಎಂಬ ನಿಶ್ಚಿತ ನಂಬುಗೆ ಪ್ರಶ್ನೆಗೆ ಒಳಗಾದ ಬಳಿಕ ಕೊನೆಯ ಭಾಗ ಪ್ರಾರಂಭವಾಗುವ ಕ್ರಮ ನೋಡಿ:

ಆಶೆಯೆಂಬ ತಳವೊಡೆದ ದೋಣಿಯಲಿ
ದೂರ ತೀರ ಯಾನ;
ಯಾರ ಲೀಲೆಗೋ ಯಾರೊ ಏನೋ ಗುರಿ
ಯಿರದೆ ಬಿಟ್ಟ ಬಾಣ!
ಇದು ಹೀಗೆ ಎಂಬ ನಂಬುಗೆಗೆ ಆಧಾರ ಇನ್ನು ಇಲ್ಲ

ಎಂದು ಪ್ರಶ್ನೆಗೆ ತೊಡಗಿದ್ದ ಮನ ಅನುಮಾನದಲ್ಲೆ ಕಾಣದ ಕೈಯೊಂದು ಇಲ್ಲವೇ ಇಲ್ಲ ಎಂದು ಸಂಪೂರ್ಣ ಒಪ್ಪಿಕೊಳ್ಳಲು ಸಿದ್ಧವಿಲ್ಲ. ಹುಟ್ಟು ಸಾವುಗಳ, ಬೆಳಕು ಕತ್ತಲೆಗಳ ದ್ವಂದ್ವವನ್ನು ಗ್ರಹಿಸುವ ಮನಸ್ಸಿಗೆ ಪ್ರಶ್ನೆಯ ಒಳಗೆ ನಂಬುಗೆಯೂ ಹುಟ್ಟತೊಡಗುತ್ತದೆ. ಪ್ರಶ್ನಿಸುವ ಮತ್ತು ನಂಬುವ ಎರಡೂ ಸ್ಥಿತಿ ಏಕಕಾಲಕ್ಕೆ ಇರುವ ಸಂಕೀರ್ಣ ಸ್ಥಿತಿ. ಅದನ್ನು ಅಡಿಗರು ಅರ್ಥಲಯದಲ್ಲಿ ಕಾಣಿಸುವುದು ಸ್ವಾರಸ್ಯವಾಗಿದೆ. ಅದಕ್ಕಾಗಿ ಅವರು ಭಾಷೆಯ ಸಂಧಿ ಶಕ್ತಿಯನ್ನು ಬಳಸಿಕೊಳ್ಳುತ್ತಾರೆ.

ಅಡಿಗರು ಇಲ್ಲಿ ಗುರಿ + ಇರದೆ ಇದನ್ನು "ಗುರಿಯಿರದೆ" ಎಂಬ ಯಕಾರ ಆಗಮ ಸಂಧಿಯನ್ನು ಉಳಿಸಿಕೊಂಡು ಸಾಧಿಸುತ್ತಾರೆ. ಒಂದೇ ಸಂಧಿಯನ್ನು ವಾಕ್ಯ ಸಂಯೋಜನೆಯಲ್ಲಿ ಒಡೆದು ಕವನದ ಎರಡು ಸಾಲುಗಳಲ್ಲಿ ಇಡುತ್ತಾರೆ. 'ಯಾರ ಲೀಲೆಗೋ ಯಾರೋ ಏನೋ ಗುರಿ' ಎಂದು ದೇವರ ಲೀಲೆಯನ್ನು ಒಪ್ಪಿಕೊಳ್ಳುವ ಒಂದು ಅರ್ಥವನ್ನ ಉಳಿಸಿಕೊಳ್ಳುತ್ತಾರೆ. ಮುಂದಿನ ಸಾಲು ಯಕಾರ ಆಗಮ

ಸಂಧಿಯನ್ನು ಉಳಿಸಿಕೊಂಡು 'ಯಿರದೆ' ಎಂದು ಪ್ರಾರಂಭವಾಗುವುದರಿಂದ (ಗಮನಿಸಿ: 'ಇರದೆ' ಎಂದಲ್ಲ.) ಅದು 'ಗುರಿಯಿರದೆ ಬಿಟ್ಟ ಬಾಣ' ಎಂದಾಗ ವಿಧಿ ವಾದದ ಕಾಣದ ಕೈಯ ಸಕಲ ನಿಯಂತ್ರಣ ಮೂಲ ತತ್ವವನ್ನೇ ಪ್ರಶ್ನಿಸುತ್ತಾರೆ. ಅಂದರೆ ಕವಿಯ ಮನೋಭೂಮಿಕೆಯಲ್ಲಿ 'ತೇನ ವಿನಾ ತೃಣಮಪಿ ನಚಲತಿ' ಎಂಬ ನಂಬುಗೆಯ ಬಗ್ಗೆ ಅದನ್ನು ಒಪ್ಪದ ಪ್ರಶ್ನೆಯೂ ಮತ್ತು ಒಪ್ಪಿದ ನಂಬುಗೆಯೂ ಏಕಕಾಲಕ್ಕೆ ಇದೆ.

ಒಪ್ಪಿಗೆ ಯಾಕೆಂದರೆ ಯಾರದ್ದೋ ಲೀಲೆಗೆ ನಮ್ಮ ಬಾಳು ಒಂದು ಗುರಿ. ಗುರಿಯಿಟ್ಟು ಬಾಣ ಹೊಡೆದಾಗ ಅದು ನಿಶ್ಚಯವಾದ್ದು. ಅಪನಂಬುಗೆ ಯಾಕೆಂದರೆ ಅದು ಗುರಿ ಇಲ್ಲದೆ ಒಟ್ಟಾರೆ ಬಿಟ್ಟ ಬಾಣ. ಯಾರಿಗೆ ಬೇಕಾದರೂ ತಾಗಬಹುದು. ಆಗ ಅದು ಒಂದು ನಿಶ್ಚಿತ ನಿಯಂತ್ರಕನ ಕೈಯಿಂದ ಬಂದದ್ದಲ್ಲ.

ಇದು ಆದಿ ಅಂತ್ಯವಿಲ್ಲದ ಬಯಲ ದೊರೆಗೆ ಕಾಣಬಹುದೋ ಏನೋ. (ಬಯಲು - ಶಿವಶರಣರ ಪ್ರಕಾರ ಶೂನ್ಯದ ನಿರವಯದ ಬಯಲು ಘನವಾಗಿ ಲಿಂಗವಾಗುತ್ತದೆ. ಅಡಿಗರಲ್ಲಿ ಮುಂದೆ ಭೂಮಿಗೀತದಲ್ಲಿ ಬತ್ತಲಾಗದೆ ಬಯಲು ಸಿಕ್ಕದಿಲ್ಲಿ ಎಂಬ ಅರಿವು ಬೆಳೆಯುತ್ತದೆ. ಭೂಮಿಗೀತದ ಅರಿವಿನ ಮೊದ ಒಂದು ಕಿಡಿ ಇಲ್ಲಿದೆ.) ಆದ್ದರಿಂದಲೆ ಮನುಷ್ಯ ಮಾತ್ರರಿಗೆ ಇದು ಸುಲಭವಾಗಿ ತಿಳಿಯುವಂತದ್ದಲ್ಲ. ಈ ಬಾಳನ್ನು ತಿಳಿದೆನೆಂದರೂ ತಿಳಿದ ಧೀರನಿಲ್ಲ. ಈ ತಿಳಿಯದ ಹಸಿವು ಮುಂದೆ:

ಹಲವು ತನದ ಮೈ ಮರೆಸುವಾಟವಿದು;

ನಿಜವು ತೋರದಲ್ಲ!

ವೈಚಾರಿಕತೆಯನ್ನೇ ಕಾವ್ಯ ಮಾಡುವ ಅಡಿಗರ ಮೂಲ ಒತ್ತಡ ನಿಜವು ತೋರದೆ ಇದ್ದಾಗ ಹುಟ್ಟಿಕೊಂಡ ಈ ತಹತಹದಿಂದಲೆ ಪ್ರಾರಂಭವಾಗಿದೆ. ಅದು ಬೇಂದ್ರೆಯ ಭಾವಕ್ಕೆ ಬರುವ ಹಾಗೆ ಸಂಪೂರ್ಣ ಸಮರ್ಪಣೆಯ ನಂಬುಗೆಯಿಂದ ಮೂಡಿಬರುವುದಿಲ್ಲ. ಅಡಿಗರಿಗೆ ಅದು ವೈಚಾರಿಕ ಪರೀಕ್ಷೆಗಳಲ್ಲಿ ಸುಟ್ಟು ಹುಟ್ಟಿ ಬರಬೇಕು.

ಬೇಂದ್ರೆಗೆ ಅದು ಅದೃಷ್ಟ ಅಚಿಂತ್ಯವಾಗಿ ಉದಯವಾಗುವ ಜ್ಞಾನ. "ಕಂಡ ಕಂಡ ಹಾಗೆ ನವ್ಯ ಭವ್ಯ ದಿವ್ಯವಾಗಿ ತೆರೆವೆ / ಓ ಅದೃಷ್ಟ ಓ ಅದೃಷ್ಟ ಓ ಅದೃಷ್ಟವೇ!" ಅಂತಹ ಅದೃಷ್ಟಮುಂದೆ, "ಅಮೃತ ಜೀವ ಕೆಡೆಯ ಕೊಡುವನಂತ ಶಾಂತ ಜೀವಕಾಂತ! ಓ ಅಚಿಂತ್ಯ ಓ ಅಚಿಂತ್ಯ ಓ ಅಂಚಿತ್ಯವೇ!"

ಅರೆ ಬೆಳಕಿನ ಬಾಳಲ್ಲಿ ಸುತ್ತಿ ಮರಣ ತೀರ ಘನ ತಿಮಿರದಲ್ಲಿ ಬೆರೆಯುವ ಕ್ರಿಯೆ ಅಡಿಗರಿಗೆ. ಅವರಿಗೆ 'ದುಷ್ಟ' ಅಥವಾ 'ಈವಿಲ್'ನ್ನು ಕಡೆಗಣಿಸಿ ನಂಬುಗೆಯನ್ನು ಅಪ್ಪಿಕೊಳ್ಳುವುದು ಸಾಧ್ಯವಿಲ್ಲ. ಅಡಿಗರಿಗೆ 'ನಿಜವು ತೋರದು' ಎಂಬ ಎಚ್ಚರವಿದೆ. ಬೇಂದ್ರೆ ಅವರ 'ಮೂರ್ತಿ' ಸಂಕಲನದ 'ಅಚಿಂತ್ಯ' ಎಂಬ ಕವನ ಪ್ರಾರಂಭವಾಗುವುದು:

ನಿಜವ ಕಂಡವರಿಲ್ಲ,
ನಿಜ ಕಾಣುವಂತಿಲ್ಲ,
ನಿಜವೇನು ಮಳಲ ಹುಡಿಗಿಂತ ಕೀಳೇ?
ನಿಜವ ಕಂಡಿಹೆನೆಂಬ
ಕಣ್ಣ ಜಂಭದ ಹುಂಬ!
ಮಳಲ ಹುಡಿ ಗುಟ್ಟೇನು ಕಣ್ಣ ಕೂಳೇ?

ಬೇಂದ್ರೆಯವರ ಪ್ರಾರ್ಥನಾ ರೂಪದ ಈ ಕವನವನ್ನು ಅಡಿಗರ ಪರಿಶೀಲನಾ ಮನೋ ಭೂಮಿಗೆಯ ಕವನದ ಜೊತೆ ನೆನಪಿಸಿಕೊಳ್ಳಲು ಒಂದು ಕಾರಣವಿದೆ . ಅಡಿಗರು ಪರಿಶೋಧನೆಯ ಪರೀಕ್ಷೆಯಿಂದ ನಂಬುಗೆಯ ನೆಲೆಗೆ ತಲುಪುತ್ತಾರೆ. ಬೇಂದ್ರೆಯವರು ನಂಬುಗೆಯ ನೆಲೆಯಿಂದಲೆ ಹೊರಡುತ್ತಾರೆ. ನಿತ್ಯ ನಿಚ್ಚ ನಿಜ ಇದು ಸಂಸ್ಕೃತದ ನಿತ್ಯವು ಇಂದಿನ ಕನ್ನಡಕ್ಕೆ ಬಂದ ಕ್ರಮ. ದೇಹ ಶಾಶ್ವತವಲ್ಲ. ಆತ್ಮ ಅಮರ ಹಾಗಾಗಿ ಶಾಶ್ವತ ಆದ್ದರಿಂದ ನಿತ್ಯ ಇರುವುದರಿಂದ ನಿಜ. ಭಗವದ್ಗೀತೆಯ ಆತ್ಮದ ಈ ಶಾಶ್ವತ ತತ್ವ ಬೇಂದ್ರೆಯವರ ಮೂಲ ನೆಲೆ. ಆದರೆ ಅಡಿಗರಿಗೆ ಈ ಬಾಳಿನೊಳಗೆ ಇಲ್ಲಿನ ನಂಬುಗೆಗಳಲ್ಲಿ ಇಲ್ಲಿನ ಏಳು ಬೀಳುಗಳ ಹೊರಳಾಟಗಳಲ್ಲಿ ನಿಜವು ತೋರಬೇಕು. ಬೇಂದ್ರೆಯವರಿಗೆ ನಿಜವು "ಕಂಡಕಂಡ ಹಾಗೆ" ತೆರೆವ ಅದೃಷ್ಟ ಅವರಿಗೆ ಕಾಣುವುದು ಕೂಡಾ ಅದೃಷ್ಟದ ನಂಬಿಕೆಯಿಂದ. ಅದೃಷ್ಟ ಎಂಬ ಶಬ್ದದ ಒಳಗೆ ಹುದುಗಿರುವ, ಅನೇಕ ಅರ್ಥ, ಭಾವಗಳ ಭಾಷಾ ಸ್ಪರ್ಶದಿಂದ ಅದೃಷ್ಟವು ದೃಷ್ಟಿಗೆ ಕಾಣುವ ಈ ಲೋಕದ ಜೊತೆ ಕವಿ ಮನಸ್ಸಿನ ಮೂಲಕ ಸಂಪರ್ಕ ಸಾಧಿಸುತ್ತದೆ. ಅದೃಷ್ಟದ ನಂಬುಗೆಯಿಂದ ದೃಷ್ಟಿಗೆ ಬೀಳುವ ಈ ಭೂಮಿಯ ವಿವರಗಳ ಜೊತೆ ಒಂದು ವ್ಯವಹಾರ ಉಂಟಾಗುತ್ತದೆ. ಒಂದು 'ಬೆಳಗು' ಕೂಡಾ "ಇದು ಬರಿ ಬೆಳಗಲ್ಲೋ" ಎಂದಾಗುವುದು ಈ ಭೂಮಿಯ ಬೆಳಗಿನ ವ್ಯವಹಾರವು ಭಾವ ಸ್ಥಿತಿಯಲ್ಲಿ ಕಣ್ಣಿಗೆ ಕಾಣದ ಅದೃಷ್ಟದ ಜೊತೆ ಉಂಟು ಮಾಡುವ ಸಂಪರ್ಕದಿಂದ. ನಿತ್ಯದ ಲೀಲೆಯ ಶಕ್ತಿಯಲ್ಲಿ ಬೇಂದ್ರೆಗೆ ಅಚಿಂತ್ಯವಾದ ನಂಬುಗೆ. ಆ

ನಂಬುಗೆಯನ್ನು ಆದಿ ಅಂತ್ಯಗಳ ಹಂಗಿಲ್ಲದ ಸಂಯೋಗ ಭಾವದಲ್ಲಿ ಅನುಭವಿಸುವುದೆ ಬೇಂದ್ರೆಯವರಿಗೆ ನಿಜವನ್ನು ಕಾಣಬಹುದಾದ ಕ್ರಮ. ಅದು ಅನುಭವ ವೇದ್ಯ.

ಆಧುನಿಕ ಮನಸ್ಸಿನ ಒಂದು ಗುಣ ಎಂದರೆ ಇರಬೇಕಾದ ಹಾಗೆ ಕಾಣುವುದಕ್ಕಿಂತಲೂ ಇರುವ ಹಾಗೆ ಕಾಣುವುದು. ನವೋದಯ ಆದರ್ಶಕ್ಕೂ ನವ್ಯರ ವಾಸ್ತವ ಪ್ರಜ್ಞೆಗೂ ಇರುವ ಮುಖ್ಯ ವ್ಯತ್ಯಾಸವೇ ಇದು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಇಲ್ಲದೇ ಇರುವುದನ್ನು ಕಾಣಬಯಸುವ ಆ ಆದರ್ಶದ ಹಂಬಲ ಸಹಜವಾದ್ದು. ಸ್ವಾತಂತ್ರ್ಯಾನಂತರದ ಆತ್ಮ ಪರೀಕ್ಷೆಯ ಕಾಲದಲ್ಲಿ ನಂಬುಗೆ ಒಂದು ಭ್ರಮೆಯಾಗಬಾರದು ಎಂಬ ಎಚ್ಚರ ಹೆಚ್ಚು ಜಾಗ್ರತವಾಗತೊಡಗಿತು. ಅಡಿಗರಿಗೆ ಪರಂಪರೆಯನ್ನೂ ಪರಂಪರಾಗತವಾಗಿ ಬಂದ ನಂಬಿಕೆಗಳನ್ನೂ, ಅಂತಹ ಸಮಾಜದಲ್ಲಿ ಹುಟ್ಟಿ ಬೆಳೆದ ವಿಚಾರ, ತತ್ವ, ಮೌಲ್ಯಗಳನ್ನು ಪರೀಕ್ಷಿಸುವುದು ಅನಿವಾರ್ಯವಾಯಿತು. ನಂಬುಗೆಗೆ ವಯ್ಯಕ್ತಿಕವಾಗಿ ಸ್ವಂತದ ಹಾಗೂ ಪರಂಪರೆ ಮೂಲಕ ಸಂಸ್ಕೃತಿ ಸಮಾಜಗಳ ಸಂಪರ್ಕ ಇರುವುದರಿಂದ ಅಡಿಗರಿಗೆ ಪರಂಪರೆಯ ಪರೀಕ್ಷೆ ಸ್ವಂತ ಹಾಗೂ ಸಮಾಜದ (ವ್ಯಷ್ಟಿ ಹಾಗೂ ಸಮಷ್ಟಿ) ಶೋಧನೆಯಾಯಿತು. ರಾಜಕೀಯ ತತ್ವ ಹಾಗೂ ನಾಯಕರು ಸಮಾಜದ ಒಟ್ಟು ನಂಬುಗೆಯ ಭಾಗವಾಗಿರುವುದರಿಂದ, ಅವರ ಸಾಮಾಜಿಕ ಹಾಗೂ ರಾಜಕೀಯ ನಿಲುವುಗಳಲ್ಲಿ ಸ್ವಂತದ ತುರ್ತಿನ ನಿಕಟತೆ ಮೂಡಿ ಬಂತು. ಸ್ವಂತದ ನಂಬಿಕೆಗಳಂತೆ ಪರಂಪರೆಯ ಹಾಗೂ ಸಮಾಜದ ನಂಬುಗೆಗಳು ಇದು ತನ್ನದೆ, ತನ್ನ ಆತ್ಮದ ಹಾಗೂ ಮನೆಯೊಳಗಿನ ಕೆಲಸದಷ್ಟೆ ಮುಖ್ಯವಾದ್ದು ಎಂಬ ತುರ್ತಿನಲ್ಲೆ ಪರೀಕ್ಷೆಗೆ ತೊಡಗುತ್ತಾರೆ. ಅವರ ವಿಡಂಬನೆ ಇತ್ಯಾದಿಗಳು ಕೂಡಾ ಈ ತುರ್ತಿನ ಒತ್ತಡದ ಒಂದು ಅಭಿವ್ಯಕ್ತಿ ಎಂಬುದನ್ನು ನಾವು ಮರೆಯಬಾರದು.

ಅಡಿಗರ ವ್ಯಕ್ತಿತ್ವದಲ್ಲಿರುವ ಧಾರ್ಮಿಕತೆಗೂ ನವೋದಯದ ನಂಬುಗೆಗಳಿಗೂ ಮೂಲದಲ್ಲಿರುವ ವ್ಯತ್ಯಾಸವನ್ನು ಸೂಚಿಸುವುದಕ್ಕಾಗಿ ಮೇಲಿನ ಮಾತುಗಳನ್ನು ವಿವರಿಸಬೇಕಾಯಿತು. ಕಾಲಘಟ್ಟದಲ್ಲಿ ಹಿಂದೆ ಸಹಜವಾಗಿ ತಿಳಿದಿದ್ದ ವಿಚಾರಗಳು ಮರೆತುಹೋದಾಗ ಕೆಲವು ಸಾಮಾನ್ಯ ಸಂಗತಿಗಳನ್ನೂ ವಿಮರ್ಶೆ ನೆನಪಿಸಿಕೊಡಬೇಕಾಗುತ್ತದೆ. ಇಂದಿನ ಕನ್ನಡ ಕಾವ್ಯ ಸಂದರ್ಭದಲ್ಲಿ ಅಡಿಗರ ಬಗ್ಗೆ ಬರೆಯುವ ವಿಮರ್ಶಕರು ಹೀಗೆ ಅಡಿಗರ ಕಾವ್ಯದ ಕಾಲ ಸಂದರ್ಭಗಳನ್ನು ನೆನಪಿಸಿಕೊಳ್ಳುವುದು ಅನಿವಾರ್ಯ.

''ಕಲ್ಪ ವೃಕ್ಷದ ಭಂಗಿ ತಳೆವ ಈ ಜಡೆಕಳ್ಳಿ'' ಯ ಸೋಗು ಅಡಿಗರು ವಯ್ಯಕ್ತಿಕ ತುರ್ತಿನಿಂದ ಪ್ರಶ್ನಿಸುವ ವಿಚಾರ. ಕನಿಷ್ಟ 'ಪ್ರಾಮಾಣಿಕತೆ' ಮಾನವ ಬದುಕಿನಲ್ಲಿ ಅಂತರಂಗ ಹಾಗೂ ಬಹಿರಂಗಗಳ ಸುಸ್ಥಿತಿಗೆ ಅನಿವಾರ್ಯ. ಕಾನೂನು ಕಟ್ಟಲೆ ಬಹಿರಂಗದಲ್ಲಿ ಪ್ರಾಮಾಣಿಕತೆಯನ್ನು ರಕ್ಷಿಸಬೇಕಾದ ಒಂದು ವ್ಯವಸ್ಥೆ. ಸಂಪ್ರದಾಯ ಬಹಿರಂಗ ಹಾಗೂ ಅಂತರಂಗ ಎರಡರಲ್ಲೂ ಪ್ರಾಮಾಣಿಕತೆಯನ್ನು ಮೌಲ್ಯವಾಗಿ ಉಳಿಸುವ ಸಾಧನವಾಗಬೇಕು. ''ಎದೆಯಲಿ ಹಿರಣ್ಯಾಕ್ಷ ಪೀಠ ಸುಸ್ಥಿರವಿರಲು / ಬುರುಡೆಯಲಿ ಪ್ರಹ್ಲಾದ ಪುಟಿವುದುಂಟೆ''. ಎಂಬ ತಿಳಿವು ಕೂಡಾ ಪ್ರಾಮಾಣಿಕ ಅರಿವಿನ ಹುಡುಕಾಟ. ಈ ಪ್ರಾಮಾಣಿಕತೆಯ ಕಠೋರ ನೆಲೆಗಳ ತೀವ್ರತೆ ಎಷ್ಟೆಂದರೆ, ಅದು, 'ಕೊಲುವದನಿ, ಕೊಂದು ಬದುಕಿಸುವ ದನಿ''.

ಹೀಗೆ ಕೊಲ್ಲಬಲ್ಲ ಮತ್ತು ಕೊಂದು ಬದುಕಿಸಬಲ್ಲ ಪ್ರಾಮಾಣಿಕ ಅಂತರಂಗ ಪ್ರಜ್ಞೆಯನ್ನು ಕಟು ವಿಮರ್ಶೆಯ ನೆಲೆಗಳಲ್ಲಿ ಜಾಗೃತಗೊಳಿಸಿದ್ದು ಅಡಿಗರು ತಮ್ಮ ಕಾಲಕ್ಕೆ ಸಮಾಜಕ್ಕೆ ಹಾಗೂ ಸಾಹಿತ್ಯಕ್ಕೆ ನೀಡಿದ ಕೊಡುಗೆ. ತನ್ನ ತನದ ಅರಿವಿನ ಮೂಲಕ ಈ ಪ್ರಜ್ಞೆಯನ್ನು ಅವರು ಸಾಕ್ಷಿ ಪ್ರಜ್ಞೆಯಾಗಿ ರೂಪಿಸಿ, ಬೆಳೆಸಿ ತಮ್ಮ ಕಾವ್ಯದಲ್ಲೂ ಜೀವನದಲ್ಲೂ ಚಿಂತನೆಯಲ್ಲೂ ಸಿದ್ಧಗೊಳಿಸಿ ತೋರಿಸಿಕೊಟ್ಟರು.

ಮನುಷ್ಯನ ಮನಸ್ಸಿನ ಒಂದು ಭಾಗ ಅವನು ಉತ್ತಮ ಅಥವಾ ಕೆಟ್ಟ ಯಾವುದೇ ಕೆಲಸ ಮಾಡುವಾಗಲೂ ದೂರ ನಿಂತು ಗಮನಿಸುತ್ತಿರುತ್ತದೆ. ಎಷ್ಟು ಮುಚ್ಚಿಡಲೂ ಪ್ರಯತ್ನಿಸಿದರೂ ಈ 'ಆತ್ಮಸಾಕ್ಷಿ'ಯಿಂದ ಮನುಷ್ಯನಿಗೆ ಬಿಡುಗಡೆ ಇಲ್ಲ. ಅಡಿಗರು ಮನುಷ್ಯನ ಈ ಆತ್ಮ ಸಾಕ್ಷಿಯನ್ನು ಕ್ರಿಯಾಶಕ್ತಿಯಾಗಬಲ್ಲ ಸಾಕ್ಷಿಪ್ರಜ್ಞೆಯಾಗಿ ತಮ್ಮ ಚಿಂತನೆ ಮತ್ತು ಶೀಲದ ಶಕ್ತಿಯಿಂದ ಹೊಸದಾಗಿ ಆವಾಹಿಸಿಕೊಟ್ಟರು. ಕಾರ್ಯ ಕೈಗೊಳ್ಳದೆ ಕೂತು ನೋಡುತ್ತಿದ್ದ ಆತ್ಮ ಸಾಕ್ಷಿಯನ್ನು ಕಾರ್ಯಶೀಲವಾದ ಸಾಕ್ಷಿ ಪ್ರಜ್ಞೆಯಾಗಿ ಅಡಿಗರು ಪರಿವರ್ತಿಸಿದ್ದು ಪರಂಪರೆಯ ಜೊತೆ ತಮಗಿದ್ದ ಪ್ರಶ್ನೆಪ್ರೇಮದ ಸಂಬಂಧದಿಂದಲೆ.

ಆತ್ಮ ಸಾಕ್ಷಿಗೆ ಇದ್ದ ಶಕ್ತಿ ಪರಂಪರೆಯಿಂದ ಬಂದ ನಂಬುಗೆಗಳಲ್ಲಿ. ಪಾಪ ಪುಣ್ಯಗಳ ಕಲ್ಪನೆಯಲ್ಲಿ. ಸಂಸ್ಕೃತಿಯಲ್ಲಿ ಸಿದ್ಧವಾದ ವಿಚಾರಗಳಿಂದ ಉಂಟಾದ ಕಲ್ಪನೆಗಳಲ್ಲಿ. ಮ್ಯಾಕ್‌ಬೆತ್ ತಾನು ಮಾಡಿದ ಕೊಲೆಗಳಲ್ಲಿಂದ ಬಿಡುಗಡೆ ಹೊಂದದೆ ಇರುವುದು. ಲೇಡಿ ಮ್ಯಾಕ್‌ಬೆತ್‌ಳ ಕೈಯ ರಕ್ತದ ಕಲೆಗಳು ಅವಳ ಮನದೊಳಗೆ ತೊಳೆದು ಹೋಗದಿರುವುದು ಹೀಗೆ. ತನ್ನತನದ ಅರಿವಿನ ಹುಡುಕಾಟದಲ್ಲಿ, ತನ್ನ ಒಳಗೆ ಮತ್ತು ಹೊರಗೆ ಶೋಧನೆಯಲ್ಲಿ ತೊಡಗಿದ ಅಡಿಗರು ಪ್ರಶ್ನಿಸುವ ಹಾಗೂ ಸ್ವೀಕರಿಸುವ

ಪ್ರಾಮಾಣಿಕ ವೈಚಾರಿಕತೆ ಮೂಲಕ ಆತ್ಮಸಾಕ್ಷಿಯ ಒಳ ಅರಿವಿಗೆ ಅಂಗಸಾಧನೆ ಮಾಡಿಸಿ ಚೇತನ ತುಂಬಿದರು. ವಿವೇಚನೆಯ ತಾರತಮ್ಯ ಜ್ಞಾನದಿಂದ ಕ್ರಿಯಾಶೀಲರನ್ನಾಗಿ ಮಾಡಿದರು. ಸಾಕ್ಷಿ ಪ್ರಜ್ಞೆಯ ಚಿಂತನ ಶಕ್ತಿ ಬಹಿರಂಗ ಪ್ರಪಂಚದ ಕಾರಣಗಳಿಂದ ಕುಂಠಿತವಾಗದ ಹಾಗೆ 'ನಿನಗೆ ನೀನೇ ಗೆಳೆಯ ನಿನಗೇ ನೀನೇ' ಎಂಬ ಬೀಜ ಶಕ್ತಿಯನ್ನು ಪ್ರೇರೇಪಿಸಿದರು. ಚಿಂತನೆ, ವೈಚಾರಿಕತೆಗಳ ಮೂಲಕ ಕ್ರಿಯಾಶೀಲಗೊಳ್ಳುವ ಈ ಸಾಕ್ಷಿ ಪ್ರಜ್ಞೆ ಪರಂಪರೆಯ ಸಾತತ್ಯದ ಜೊತೆ ಲೋಕಶೀಲದ ಒಂದು ಸಹಭಾಗಿತ್ವನ್ನು ಹೊಂದುತ್ತದೆ. 'ಅಜ್ಜನೆಟ್ಟಾಲ' ಕವನದ ಈ ಸಾಲುಗಳು:

ಹೊಕ್ಕು ಹೊರಡುವ ಹೊರಟೆ ಬಿಡುವ ಗಾಳಿಯ ಶೀಲ ಬಿತ್ತವಾಗಲು ತಿಣುಕಿ ಸಾಯುವಾಲ.

ಗಾಳಿಯ ಶೀಲ ಎಂಬುದು ವಾಯುತತ್ವದ ಅಗಾಧತೆಯನ್ನು ಸೂಚಿಸುವಂತಿದೆ. ನಮ್ಮ ದೇಹದೊಳಗೆ ಹೊಕ್ಕು ಹೊರಡುವ ಗಾಳಿ ಒಮ್ಮೆ ಹೊರಟೆ ಬಿಡುತ್ತದೆ. ಆ ಬಳಿಕ ಮತ್ತೆ ಪುನಃ ಹೋಗುವುದಿಲ್ಲ. ಹಾಗೆ ಹೊರಟೆ ಬಿಡುವ ಶೀಲ ಗಾಳಿಗೆ ಇರುವುದರಿಂದಲೆ ಹುಟ್ಟು ಸಾವಿನ ಆ ವರ್ತನದಲ್ಲಿ ಈ ಜಗತ್ತು ಸಾಗುತ್ತಿದೆ. ಹೊರಟೆ ಬಿಡುವ ಗಾಳಿ ಒಂದೊಮ್ಮೆ ಶೀಲಗೆಟ್ಟು ಇನ್ನ್ಯಾವಾಗಲೋ ಹೋಗಲು ಶುರು ಮಾಡಿದರೆ ಲೋಕದ ಸುಸೂತ್ರತೆ ಉಳಿಯಲಾರದು. 'ಗಾಳಿಯ ಶೀಲ'ದ ಬಗ್ಗೆ ಪ್ರಕೃತಿಗೆ ಅಂತಹ ವಿಶ್ವಾಸ. ಆದರೆ ಆಲ ಸಾಯುವಾಗ ಅದು ಬಿತ್ತವಾಗಲು ತಿಣುಕುತ್ತದೆ. ಹಾಗೆ ಬೀಜವಾಗಿ ಮೊಳೆಯುವ ಜೀವದಲ್ಲಿ ಗಾಳಿ ಮತ್ತೆ ಹೊಕ್ಕು ಹೊರಡತೊಡಗುತ್ತದೆ. ಹೊರಟೆ ಬಿಡುವವರೆಗೆ ಉಳಿಯುತ್ತದೆ.

'ಶೀಲ'ಕ್ಕೆ ಒಂದು ಸಮಾಜದ ಆಯಾಮವೂ ಇದೆ. ದಾಂಪತ್ಯದ ಚೌಕಟ್ಟು ಇದೆ. (ಮರಳಿ ಮಣ್ಣಿಗೆಯಲ್ಲಿ ಡಾ॥ ಶಿವರಾಮ ಕಾರಂತರು ಹೇಳುವ ಮಾತು: ಲಚ್ಚ ತಾನು ಕೆಟ್ಟದ್ದಲ್ಲದೆ ತನ್ನ ದಾಂಪತ್ಯದ ಶೀಲವನ್ನೂ ಕೆಡಿಸಿದ.) ದೊಡ್ಡ ಆ ವರ್ತನವೊಂದರ ಸಾಮರಸ್ಯ ಸುಲಭವಲ್ಲ. ಪ್ರಕೃತಿ ಸಹಜಕ್ಕೆ ಮಾನವ ಪ್ರಕೃತಿ ಸಹಜ ಹೊಂದಬೇಕು. ('ಕಾಮದಹನ' 'ಬತ್ತಲಾರದ ಗಂಗೆ' ಸಂಕಲನ) ಪ್ರಕೃತಿ, ಸಮಾಜ, ಕುಟುಂಬ, ಇವುಗಳೆಲ್ಲದರ ಸಾಮರಸ್ಯ ಇರಬೇಕು. ಅದನ್ನು ಅಂತರಂಗದ ಅರಿವಿನಲ್ಲಿ ಪಡೆಯುವುದು. ಶಂಕುಮತಿಯಾಗಿ ಆಲವನ್ನು ಕತ್ತರಿಸಿ ಬಿಸುಟರೂ 'ಒಳಗೆ ಹೊಕ್ಕಳಿನಿಂದ ನೆತ್ತಿಯವರೆಗೆ / ನೆಳಲಾಗಿ ಉಂಟು ಸಾವಿರದ ಕಂಭದ ಬಸದಿ'. ಅದನ್ನು ಹೊರಗೆ ತರುವ ಪವಾಡಕ್ಕೆ ಕಾಯುವುದು ಅನಿವಾರ್ಯವಾದರೂ, ಪ್ರಶ್ನಿಸುವುದೂ

ಅಗತ್ಯ. ಅರಿವಿನ ಹದ ಸದಾ "ಕಲಿಸು ಬಾಗದೆ ಸೆಟೆವುದನ್ನು, ಬಾಗುವುದನ್ನು" ಎಂಬ ತಿಳುವಳಿಕೆಯೊಡನೆ ಪ್ರಬುದ್ಧವಾಗಿದೆ. ಪರಂಪರೆಯ ಸಾತತ್ಯದ ಗ್ರಹಿಕೆಯಲ್ಲಿ ಅಡಿಗರ ಶೋಧನೆ ಸಾಕ್ಷಿ ಪ್ರಜ್ಞೆಯು ಶೀಲದ ದೊಡ್ಡದೊಂದು ಚೌಕಟ್ಟಿನಲ್ಲಿ ಕ್ರಿಯಾಶೀಲವಾಗುವುದೇ ಆಗಿದೆ.

(ಈ ಲೇಖನ ಅಡಿಗರ ಕಾವ್ಯಾಧ್ಯಯನಕ್ಕೆ ಅನುಕೂಲವಾಗುವಂತೆ ಎಸ್. ಆರ್. ವಿಜಯಶಂಕರ ಬರೆಯಲು ಉದ್ದೇಶಿಸಿರುವ ಪುಸ್ತಕವೊಂದಕ್ಕಾಗಿ ಮಾಡಿಕೊಂಡಿರುವ ಟಿಪ್ಪಣಿಯೊಂದರ ವಿಸ್ತೃತರೂಪ. – ಸಂಪಾದಕ.)



# ಅಡಿಗರ ಹಸಿವಿನ ಸ್ವರೂಪ

**-ಕೆ.ಸತ್ಯನಾರಾಯಣ**

ಲೇಖಕನೊಬ್ಬನನ್ನು ಯಾರೂ ರೂಪಿಸಲು ಸಾಧ್ಯವಿಲ್ಲ. ಮುಖ್ಯವಾದ ಲೇಖಕರ ಬಗ್ಗೆಯಂತೂ ಈ ಮಾತು ಇನ್ನೂ ಹೆಚ್ಚು ನಿಜ. ತನ್ನನ್ನು ತಾನು ಯಾವ ರೀತಿ ರೂಪಿಸಿಕೊಳ್ಳಬೇಕು ಎಂಬ ಅರಿವು ಮುಖ್ಯವಾದ ಲೇಖಕನೊಬ್ಬನಿಗೆ ಅವನ ಬರವಣಿಗೆಯ ಮೊದಮೊದಲ ದಿನಗಳಿಂದಲೂ ಇರುತ್ತದೆ-ಪ್ರಜ್ಞಾಪೂರ್ವಕ ವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ, ಇಂತಹ ಅರಿವು ಇದ್ದೂ ಅದರ ಜೊತೆಗೆ ತಕ್ಕ ಪ್ರತಿಭೆ ಮತ್ತು ವ್ಯುತ್ಪತ್ತಿ ಇದ್ದವನು ಮಾತ್ರ ಸಂಸ್ಕೃತಿಗೆ ಮುಖ್ಯ ಲೇಖಕನಾಗುತ್ತಾನೆ. ಅಥವಾ ಅಂತಹ ಅರಿವು ತೀವ್ರವಾಗಿದ್ದವನು ಮಾತ್ರ ಆ ಅರಿವಿಗೆ ತಕ್ಕ ಪ್ರತಿಭೆ, ಪ್ರಕಾರ ಮತ್ತು ವ್ಯುತ್ಪತ್ತಿಗೆ ಜೀವನದುದ್ದಕ್ಕು ಹುಡುಕಾಡುತ್ತಾನೆ. ಈ ದೃಷ್ಟಿಯಿಂದ ನೋಡಿದಾಗ ಲೇಖಕನ ಬಹುಪಾಲು-ಪ್ರತಿಭೆಯಲ್ಲಿ-ಸಾಧನೆಯಲ್ಲಿ-ಜನ್ಮತಃ ಅವನಿಗೆ ವರವಾಗಿ ಬಂದದ್ದೇ ಹೆಚ್ಚಾಗಿರುತ್ತದೆ.

ಅಡಿಗರಂತಹ ಒಬ್ಬ ಲೇಖಕರಲ್ಲಿ ಈ ಅರಿವು ಹೇಗಿರುತ್ತದೆ ಎನ್ನುವುದನ್ನು ತಿಳಿಯಲು ಕಾವ್ಯದ ಮೂಲಕ ಅವರು ಹಿಂಗಿಸಿಕೊಳ್ಳಲು, ಅಭಿವ್ಯಕ್ತಗೊಳಿಸಲು ಆಶಿಸುತ್ತಿದ್ದ ಒಳ ಹಸಿವಿನ ಸ್ವರೂಪದ ಬಗ್ಗೆ ನಾವು ತಿಳಿದುಕೊಳ್ಳುವ ಪ್ರಯತ್ನ ಮಾಡಬಹುದು. ಸ್ವಂತಿಕೆಯ ಹಂಬಲ, ಹಸಿವು ಅವರ ಮೊದಮೊದಲ ಮುಖ್ಯ ಪದ್ಯ. "ನನ್ನ ನುಡಿ"ಯಲ್ಲೇ ವ್ಯಕ್ತವಾಗಿದೆ. ತನಗೆ ಮಾತ್ರ ಸ್ವಂತ ನುಡಿ ಸಿಕ್ಕಿಲ್ಲ ಎಂದು ಈ ಪದ್ಯ ಹೇಳುವುದಿಲ್ಲ. ಮಂದಾನಿಲಕ್ಕು ಸೌರಭಸಾರದ ದೊರೆತನವಿಲ್ಲ. ದೀಪ್ತಕಾಸಾರಕ್ಕೂ ಬಾಳ ಬೆಳಗುವ ದೀಪವಿಲ್ಲ, ಸಂಧ್ಯಾಮೇಘಕ್ಕು ಮಿಾಸಲು ಬಣ್ಣವಿಲ್ಲ, ಭೂಮಿ ಕೂಡ ಬೆಳಗುತ್ತಿರುವುದು ಚಂದ್ರ ಸೂರ್ಯರ ನೆರವಿನಿಂದ-ಒಟ್ಟನಲ್ಲಿ ಕಾವ್ಯಕ್ಕೆ ತಾನು ಉಪಯೋಗಿಸುತ್ತಿರುವ ಭಾಷೆಯಲ್ಲಿ ಮಾತ್ರವಲ್ಲ, ಇಡೀ ಜಗತ್ತಿನ ಪ್ರಕೃತಿಯ ವ್ಯಾಪಾರದಲ್ಲೂ ಕವಿಗೆ "ಸ್ವಯಂ ದೀಪಕತೆ"ಯ ಅಭಾವವೇ ಎದ್ದು ಕಾಣುತ್ತಿದೆ. ಆದರೆ ಕವಿಗೆ ಸ್ವಯಂದೀಪಕತೆ ದಕ್ಕುವುದು ತನ್ನದೇ ಆದ ಕಾವ್ಯ ಭಾಷೆಯಿಂದ, ಕಾವ್ಯ ಪರಿಕರದಿಂದ ಈ ಭಾಷೆ, ಈ ಪರಿಕರವೇ ಅವನ ಕಾವ್ಯ ವ್ಯಕ್ತಿತ್ವ. ತನ್ನೆಲ್ಲ ಪ್ರತಿಭೆ ಸಂಪನ್ಮೂಲಗಳನ್ನು ಇದಕ್ಕೆ ಅವನೇ ಧಾರೆಯೆರೆಯುತ್ತಾನೆ. ಒಳ್ಳೆಯ ಕಾವ್ಯ ರಚಿಸುವ ಮೂಲಕ ಮಾತ್ರ ತನ್ನ ಜೀವನ ಸಾರ್ಥಕತೆ, ಕೃತಾರ್ಥತೆಯನ್ನೂ ಕಾಣಲು ಸಾಧ್ಯ ಎಂದು

ಅವರೇ ಸಮಗ್ರ ಕಾವ್ಯದ ಮುನ್ನುಡಿಯಲ್ಲಿ ಬರೆದುಕೊಂಡಿದ್ದಾರೆ.

ಈ ವ್ಯಕ್ತಿ ವೈಶಿಷ್ಟ-ಕಾವ್ಯ ವೈಶಿಷ್ಟ್ಯದ ಹಂಬಲ ಅಡಿಗರ ಕಾವ್ಯ ಜೀವನದುದ್ದಕ್ಕೂ ಮತ್ತೆ ಮತ್ತೆ ಪ್ರಕಟವಾಗುತ್ತಲೇ ಇರುತ್ತದೆ. ''ಪ್ರಾರ್ಥನೆ'' ಪದ್ಯದಲ್ಲಿ ಹಂಬಲಿಸುವ ನಿಜದ ವ್ಯಕ್ತಿತ್ವಕ್ಕೆ ಕೂಡ ವ್ಯಕ್ತಿ ವೈಶಿಷ್ಟದ ಹಸಿವಿದೆ. 'ಸಾಮಾನ್ಯನಂತೆ ಈ ನಾನು' ಪದ್ಯದಲ್ಲಿ ವ್ಯಕ್ತಿ ವೈಶಿಷ್ಟ್ಯಕ್ಕೆ ಧಕ್ಕೆ ಬಂದಾಗ ಸಿಡಿದೇಳುವ ರಭಸವಿದೆ. ಬಂಡಾಯದಂತಹ ಪದ್ಯದಲ್ಲಿ ವ್ಯಕ್ತಿ ವೈಶಿಷ್ಟವನ್ನು ನಿಜ ಮಾಡಿಕೊಳ್ಳಲು ಪ್ರತಿಯೊಬ್ಬರು ತಮ್ಮೊಳಗೇ ಇರುವ ಸುಳ್ಳುಗಳ ವಿರುದ್ಧ ಬಂಡಾಯವೇಳಲೇಬೇಕಾದ ಅಗತ್ಯವನ್ನು ಸೂಚಿಸಲಾಗಿದೆ. ''ಬಿಎಂಶ್ರೀ'', ''ಅರ್ಥವಾಗುವ ಹಾಗೆ ಬರೆಯಬೇಕು'' ಇಂತಹ ಪದ್ಯಗಳಲ್ಲಿ ವ್ಯಕ್ತಿ ವೈಶಿಷ್ಟ್ಯ, ಸಂವೇದನೆಯ ಸ್ವಂತಿಕೆ, ಕನಸುಗಳ ನಿಜತನವನ್ನು ರೂಢಿಸಿಕೊಳ್ಳಲು ಹಿಂದಿನ ತಲೆಮಾರನ್ನು ಪ್ರಶ್ನಿಸಬೇಕಾದ ತುರ್ತಿನ ಅಗತ್ಯವನ್ನು ಒಳಗೊಳ್ಳುವ ಪ್ರಯತ್ನವಿದೆ. 'ಶ್ರೀರಾಮನವಮಿಯ ದಿವಸ', 'ಆನಂದತೀರ್ಥ', 'ಶಾಂತವೇರಿಯ ಅಶಾಂತ ಸಂತ'- ಇಂತಹ ಕವನಗಳಲ್ಲಿ ವ್ಯಕ್ತಿ ವೈಶಿಷ್ಟ್ಯವನ್ನು ತಮ್ಮ ಜೀವನದಲ್ಲಿ ನಿಜ ಮಾಡಿಕೊಂಡವರ ಜೀವನದ ವಿವರಗಳ ಕಾವ್ಯ ಶೋಧನೆಯಿದೆ.

ಈ ವ್ಯಕ್ತಿ ವೈಶಿಷ್ಟ್ಯದ ಸ್ವರೂಪದ ವ್ಯಾಪ್ತಿ ಎಂತಹುದು ? ಮತ್ತೆ ಮತ್ತೆ ಭಾಷೆ ಮತ್ತು ಕಾವ್ಯ ಪರಿಕರಗಳಿಗೆ ಮಾತ್ರವೇ ಸಂಬಂಧಿಸಿದ್ದು. ಹಾಗಾಗಿ ಅಡಿಗರ ಎಲ್ಲ ಮುಖ್ಯ ಪದ್ಯಗಳು ಕಾವ್ಯ ಮತ್ತು ಜೀವನವನ್ನು ಒಟ್ಟಿಗೇ ಕುರಿತದ್ದಾಗಿರುತ್ತದೆ. ಮತ್ತೆ ಮತ್ತೆ ಅದನ್ನು ಸ್ಥಾಪಿಸಲು ಪ್ರಯತ್ನಿಸುತ್ತಲೇ ಇರುತ್ತಾರೆ. ನವೋದಯ ಕಾವ್ಯದ ದೈತ್ಯ ಪ್ರತಿಭೆಗಳ ಮುಂದೆ ತನ್ನನ್ನು ತಾನು ಖಚಿತವಾಗಿ ನಿರ್ದಿಷ್ಟವಾಗಿ ಸ್ಥಾಪಿಸಿಕೊಳ್ಳುವ ಪ್ರಯತ್ನವೇ ಇದು ಇದ್ದಿರಬಹುದು. ಹೀಗೆ ನಮ್ಮನ್ನು ನಾವು ಸ್ಥಾಪಿಸಿಕೊಳ್ಳುವ ಪ್ರಯತ್ನದಲ್ಲಿ ತೀವ್ರತೆ ಮತ್ತು ರಭಸ ಮಾತ್ರವಲ್ಲ, ನಮ್ಮನ್ನು ಯಾರೋ ತುಳಿಯುತ್ತಿದ್ದಾರೆ, ಬದಿಗೆ ಸರಿಸುತ್ತಿದ್ದಾರೆ ಎಂಬ ಸದಾ ಆತಂಕವೂ ಇರುತ್ತದೆ. ಈ ತೀವ್ರತೆ, ರಭಸ, ಆತಂಕದಿಂದ ಹುಟ್ಟುವ, ವಿಚಿತ್ರ ಚೈತನ್ಯ ಅಡಿಗರ ಕಾವ್ಯದುದ್ದಕ್ಕೂ ಇದೆ. ಇದು ಅವರಲ್ಲಿ ಎಂದೂ ಹಿಂಗದ ಚೈತನ್ಯ ಹಾಗೆ ನೋಡಿದರೆ ''ನನ್ನ ನುಡಿ'' ಕವನದಲ್ಲಿ ವ್ಯಕ್ತವಾಗುವ ಸ್ವಂತಿಕೆಯ ಹಸಿವು ಜೀವನದುದ್ದಕ್ಕೂ ಇದೆ. ಈ ಹಸಿವು ಅವರ ಕಾವ್ಯ ಜೀವನದುದ್ದಕ್ಕೂ ಇಲ್ಲದೇ ಹೋಗಿದ್ದರೆ ಕಾವ್ಯ ಎಂದೋ ಯಾಂತ್ರಿಕವಾಗಿಬಿಡುತ್ತಿತ್ತು. ಈ ರೀತಿಯ ಒಳ ಹಸಿವು ಎಷ್ಟು ಜನ ಲೇಖಕರಿಗೆ ಜೀವನದುದ್ದಕ್ಕು ತೀವ್ರವಾಗಿರುತ್ತದೆ?

ಇಷ್ಟನ್ನು ಒಪ್ಪಿಕೊಂಡು ನಂತರ ಒಂದೆರಡು ಪ್ರಶ್ನೆಗಳನ್ನು ಕೇಳಬಹುದು. ಯಾವಾಗಲೂ ನಮ್ಮ ಬಗ್ಗೆಯೇ ನಮಗಿರುವ ಗಮನ, ಆತಂಕ, ಎಷ್ಟೇ ನಿಜ ಸ್ವರೂಪದಾಗಿದ್ದರೂ ಅದು ಎಷ್ಟನ್ನು ಕಾಣಬಹುದು. ಏನನ್ನು ಕಾಣಬಹುದು, ಏನೆಲ್ಲವನ್ನು ಒಳಗೊಳ್ಳಬಹುದು? ನಮ್ಮ ಸ್ವಭಾವಕ್ಕೆ ವಿರುದ್ಧವಾದದ್ದನ್ನು, ನಮ್ಮ ಸ್ವಭಾವವನ್ನು ಮೀರಿದ್ದನ್ನು ಅದು ಒಪ್ಪುವುದಿಲ್ಲ, ಗ್ರಹಿಸುವುದಿಲ್ಲ. ಅಂದರೆ ಒಳಹಸಿವು ಪ್ರಾಮಾಣಿಕವಾಗಿದ್ದರೂ, ಅದರ ವ್ಯಾಪ್ತಿ ಕಿರಿದಾಗಿಬಿಡಬಹುದು.

ಹೋಲಿಕೆಗೆಂದು ಬೇಂದ್ರೆಯವರ ಹಸಿವಿನ ಸ್ವರೂಪವನ್ನು ಗಮನಿಸಬಹುದು. ''ಹಸಿ ಹಂಬಲ'' 1919ರಲ್ಲಿ ಅಂದರೆ ಬೇಂದ್ರೆಯವರಿಗೆ ಇಪ್ಪತ್ತು ಮೂರು ವರ್ಷವಾಗಿದ್ದಾಗ ರಚಿಸಿದ ಪದ್ಯ. ಸೋಜಿಗವೆಂದರೆ ಈ ಪದ್ಯದಲ್ಲಿ ಅಡಿಗರ ''ನನ್ನ ನುಡಿ'' ಯಲ್ಲಿ ಸಿಗುವ, ಹೂವು, ದೊರೆ, ಬಣ್ಣ, ನನ್ನ, ನನಗೆ-ಇಂತಹ ಪದಗಳೇ ಇವೆ. ಅಡಿಗರಿಗೆ ತಮ್ಮನ್ನು ತಾವು ಬಗೆದುಕೊಂಡು ಸ್ವಂತ ನುಡಿ ಕಟ್ಟನ್ನು ಪಡೆಯುವುದು, ಸ್ಥಾಪಿಸುವುದು, ಇದರಿಂದಲೇ ಮುಕ್ತಿ ಸಿಗುವುದಾದರೆ ಬೇಂದ್ರೆಯ ಹಸಿವಿನ ಹಂಬಲದ ವ್ಯಾಪ್ತಿ ಇನ್ನೂ ದೊಡ್ಡದಾಗಿದೆ.

ಬಣ್ಣ ಬಣ್ಣದ ಹಕ್ಕಿ, ಹೊನ್ನು ರನ್ನದ ಮೋಡ
ನುಣ್ಣನೆಯ ಕೆಂಪ ಹೂ, ತಣ್ಣನೆಯ ತಂಪು ದೊರೆ
ಕಣ್ಣ ಮುಂದೆನ್ನ ಈ ತಾಳ ತಂತಿಯ ನರಿಯ
ದಂಥ ಸಂತೆಯನು ನೆರಸಿ
ಕಣ್ಣ ಕಟ್ಟಲು ಬಯಸುವುದು ಬಣ್ಣ ದಾಟದಲಿ
**ನನ್ನ ನೆತ್ತರು ಅವರ ತಾಳಮೇಳವ ಕೂಡಿ**
**ಭಿನ್ನ ಆಟದ ಮರವೆ ಮನಸಿಗಾಗುವರೆಗೆ**
**ಏನಿದ್ದರೇನು ನನಗೆ?**

ಮುಂದೆ ಇದೇ ಪದ್ಯದಲ್ಲಿ ದೊರೆವಾಡುಗಳ ಸೀಮೆಗಳ ಸಮ್ರಾಟನಾಗುವ, ಸಾಮಗಾನದ ಛಂದಸ್ಸಿನಲ್ಲಿ ಬರೆಯುವ ಹಸಿವು ಕೂಡ ವ್ಯಕ್ತವಾಗಿದೆ. ಬೇಂದ್ರೆಯ ಸ್ವಂತಿಕೆಯ ಹಸಿವಿನಲ್ಲಿ ತನ್ನನ್ನು ತಾನು ಸ್ಥಾಪಿಸಿಕೊಳ್ಳುವ ಆಸೆಯ ಜೊತೆಗೆ, ಪ್ರಕೃತಿಯನ್ನು ಜೀವನವನ್ನೂ ಹೊಸದಾಗಿ ಕಾಣಬೇಕು, ಕಾಣಿಸಬೇಕು ಎಂಬ ಆಸೆಯೂ ಇದೆ. ಹೀಗಾಗಿ ಅವರಿಗೆ ''ದಿನದಿನಸಗೆ ಮುಗಿಲಿನೊಳು ದಶಲಕ್ಷ ಪುರಗಳಿವೆ'' ಮತ್ತು ಆ

ಕಡೆಗೆ ತನ್ನ ಪ್ರತಿಭಾ ವಿಲಾಸವನ್ನು ಎಸೆಯುವೆನು ಎಂಬ ಹುಮ್ಮಸ್ಸಿದೆ. ಹಾಗಾಗಿ ಅವರಿಗೆ ತಾವು ಹಾಡಬೇಕಾದ ಹಾಡು ಕೂಡ:

"ಭೋಗ ಯೋಗದ ಪದವೆ, !
ಜೈನ ವಾಙ್ಮಯ ಮಧುವೆ!
ಯೋಗ ಭೋಗದ ಹದವೆ!
ವಚನ ಬ್ರಹ್ಮನ ವಧುವೆ!" – ಇಷ್ಟೆಲ್ಲ ಆಗಿ ಕಾಣುತ್ತದೆ.

ಬೇಂದ್ರೆ, ಅಡಿಗರ ಕಾವ್ಯ ರೂಪುಗೊಂಡ ಸಾಂಸ್ಕೃತಿಕ ಸಂದರ್ಭದ ಭಿನ್ನವಾಗಿತ್ತು ನಿಜ. ಆದರೆ ಈ ಇಬ್ಬರು ಮುಖ್ಯ ಕವಿಗಳ ಸಾಧನೆಯ ಸ್ವರೂಪವನ್ನು ಸರಿಯಾಗಿ ತಿಳಿಯಬೇಕಾದರೆ ಇಬ್ಬರ ಮೊದಮೊದಲ ಕವನಗಳಲ್ಲಿ ವ್ಯಕ್ತವಾಗುವ ಒಳಹಸಿವಿನ ಸ್ವರೂಪವನ್ನು ಮೊದಲು ಗುರುತಿಸಿಕೊಳ್ಳಬೇಕು.

ಇಂತಹ ಒಳಹಸಿವನ್ನು ಮಾನದಂಡವನ್ನಾಗಿಟ್ಟುಕೊಂಡು ಈಗ ಬರೆಯುತ್ತಿರುವವರ ಕಾವ್ಯವನ್ನೆಲ್ಲ ಒಟ್ಟಾಗಿಯೂ, ವೈಯಕ್ತಿಕವಾಗಿಯೂ ಪರಿಶೀಲಿಸಿದರೆ ನಾವು ಯಾವ ತೀರ್ಮಾನಕ್ಕೆ ಬರಬಹುದು? ಅಥವಾ ಬದಲಾದ ಜೀವನ ಸನ್ನಿವೇಶದಲ್ಲಿ ಇಂತಹ ಮಾನದಂಡದ-ತೀರ್ಮಾನದ ಅಗತ್ಯವೇ ಇಲ್ಲದೇ ಬರೆದವರೆಲ್ಲರೂ ಮುಖ್ಯ ಕವಿಗಳೇ ಆಗಿರಬಹುದೇ!



ಕಟ್ಟಿಕೊಟ್ಟ ಬುತ್ತಿಯಿಂದ ಈ ಲೋಕ ಉದ್ಧಾರಗೊಳ್ಳದು. ತನ್ನೊಳಗೆ ಬೆಳೆಯುವ ವಿವೇಕದಿಂದ ಅದು ಮೇಲಕ್ಕೆ ಬರಬೇಕು. ವ್ಯಂಗ್ಯ ಸಾಹಿತ್ಯ ವಿವೇಕವನ್ನು ಜಾಗೃತಗೊಳಿಸುವ ಒಂದು ಸಾಧನ. ವ್ಯಕ್ತಿಯ ಮೇಲಿನ ಸೇಡು ಅದರ ಗುರಿಯಲ್ಲ.

**– ಶಿವರಾಮ ಕಾರಂತ**

# ಕಾಲಕಾಲಕೆ ಬೇರೆ ಭೂಪಟ, ಮೂಡುತ್ತಲಿವೆ ಹೊಸ ಗೆರೆಗಳು'

**-ಪಿ.ಚಂದ್ರಿಕಾ**

ಅಡಿಗರನ್ನು ನೆನೆದಾಗಲೆಲ್ಲಾ ಅವರ ಕೊನೆಯ ಸಂದರ್ಶನವೊಂದು ನೆನಪಾಗುತ್ತದೆ. (ಅದು ದೂರದರ್ಶನದಲ್ಲಿ ಪ್ರಸಾರವಾಗಿದ್ದು) ಅಡಿಗರ ತಹತಹ, ತಾನು ಇಷ್ಟು ದಿನ ಏನನ್ನು ಕಳೆದುಕೊಂಡಿದ್ದೇನೋ ಅದನ್ನು ಪಡೆಮಕೊಳ್ಳಬೇಕೆಂಬ ಹಂಬಲ, ಜನರನ್ನು ತಲುಪುವಲ್ಲಿ ಸೋತಿದ್ದು ಏಕೆ ? ಎಂಬ ಜಿಜ್ಞಾಸೆ, ಜನರನ್ನು ತಲುಪಬೇಕೆಂಬ ಅದಮ್ಯ ಹಂಬಲ - ಇವೆಲ್ಲವನ್ನೂ ಆ ಸಂದರ್ಶನ ಒಳಗೊಂಡಿತ್ತು. ಒಂದು ಕಾಲದ ಸಾಹಿತ್ಯದ ಮೇರು ಸ್ಥಿತಿಯನ್ನು ಮುಟ್ಟಿದ ಮತ್ತು ಸಕಲರಿಂದಲೂ ಪ್ರಶಂಸೆಗೆ ಒಳಗಾಗ ತನ್ನ ನಿಲುವಿಗೇ ಗಟ್ಟಿಯಾಗಿ ಅಂಟಿಕೊಂಡು 'ನಿನಗೆ ತಾಕತ್ತಿದ್ದರೆ ಅರ್ಥ ಮಾಡಿಕೋ' ಎನ್ನುವ ನಿಲುವಿನಲ್ಲಿ ಬರೆಯುತ್ತಿದ್ದ ಅಡಿಗರ ಗಟ್ಟಿಯಾದ ನಿಲುವು ಬದಲಾಗಲು ಕಾರಣ ಏನು ? ಎನ್ನುವುದು ಕುತೂಹಲದ ಸಂಗತಿ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಂಥ ನಿಲುವು ಮತ್ತು ಆದರಿಂದ ಪಲ್ಲಟ ಸಾಮಾನ್ಯವಾದ ಸಂಗತಿಯೂ ಇದಾಗಿದೆ. ಆದರೆ ಅಡಿಗರ ವಿಷಯದಲ್ಲಿ ಇನ್ನೂ ಹೆಚ್ಚಿನದೇನೋ ಸಂಭವಿಸಿದ್ದು ಮಾತ್ರ ಸತ್ಯ.

ಹಾಗೆ ನೋಡಿದರೆ ಅಡಿಗರನ್ನು ಪೂರ್ಣವಾಗಿ ಓದಿಕೊಳ್ಳಲು ಸಾಧ್ಯವಾಗಿದ್ದು ನನ್ನ ಮಹಾ ಪ್ರಬಂಧವನ್ನು ಬರೆಯುವ ಹೊತ್ತಿನಲ್ಲಿ. ಎಲ್ಲಾ ಅಕಾಡೆಮಿಕ್ ಶಿಸ್ತನ್ನು ದಾಟಿ ಓದಲು ತೊಡಗಿದ್ದು ಆಗಲೇ. ಈ ಓದಿನ ಹೊತ್ತಿನಲ್ಲಿ ನನಗೆ ಅನ್ನಿಸಿದ್ದು ಮತ್ತು ಈಗಲೂ ಅನ್ನಿಸುತ್ತಿರುವುದು ಅಡಿಗರ ಪದ್ಯ ಕ್ಲಿಷ್ಟವಲ್ಲ, ಅದರ ಪಾಡಿಗೆ ಅವುಗಳನ್ನು ಬಿಟ್ಟಿದ್ದರೆ ಅವು ಜನರನ್ನು ಖಂಡಿತಾ ತಲುಪುತ್ತಿದ್ದವು ಎಂದು. ಆ ಕಾಲದ ತುರ್ತಾಗಿ ಅಡಿಗರನ್ನು 'ಇರುವುದಕ್ಕಿಂತ ಅತಿಯಾಗಿ' ಬಿಂಬಿಸಲು ಹೋಗಿ ಅವು ಯಾರನ್ನೂ ತಲುಪದೇ ಹೋಯಿತೇ ? ಅಥವಾ ಕಾಲದ ಅನಿವಾರ್ಯತೆಯಲ್ಲಿ ಅಡಿಗರ ಕಾವ್ಯ ಬಹಳ ಮುಂದೆ ಇದ್ದೀತೆ? ಎನ್ನುವುದು. ಬಹುಶಃ ಈ ಎರಡರಲ್ಲೂ ಸತ್ಯವಿದೆ, ಅದು ಅರ್ಧಸತ್ಯ ಎನ್ನುವುದೂ ನಿಜ.

ಅಡಿಗರ ಕಾವ್ಯವನ್ನು ಸುಮ್ಮನೆ ತಿರುವಿಹಾಕಲು ಪ್ರಾರಂಭಿಸಿದಾಗ ಬೇಂದ್ರೆ, ಕುವೆಂಪು, ಪುತಿನ, ಕೆ.ಎಸ್.ನರಂತೆ ಇವೂ ಕೂಡಾ ಕನ್ನಡ ಸಂಸ್ಕೃತಿಯ ಒಂದು ಪ್ರಧಾನ ಅಭಿವ್ಯಕ್ತಿಯ ಕ್ರಮವೆಂದೇ ಗೋಚರಿಸುತ್ತದೆ. ಇದನ್ನು ಯಾಕೆ ಒಂದು ಕೋಟೆಯನ್ನು

ಕಟ್ಟಿ ಇದು ಬೇರೆಯದ್ದೇ ಅಭಿವ್ಯಕ್ತಿಯ ಕ್ರಮ ಎಂದು ಅಡಿಗರು ಮತ್ತು ಅವರ ಸಂಗಡಿಗರು ಬಿಂಬಿಸಿದರು ಎನ್ನುವುದು ಕುತೂಹಲಕಾರಿ ಸಂಗತಿ. ಅಂದಿನ ಸಾಹಿತ್ಯದ ವಿದ್ಯಮಾನಗಳು ಹುಟ್ಟಿಹಾಕಿದ್ದ ಅನೇಕ ಸಂಗತಿಗಳೊಂದಿಗೆ ಬೆಸೆದುಕೊಂಡಂತೆ ಈ ನಿಲುವು ಬಿಂಬಿತವಾಗಿರುವುದನ್ನು ಕಾಣಬಹುದು. ಸಾಹಿತ್ಯದ ಬದಲಾದ ನಿಲುವು ಮತ್ತು ಉದ್ದೇಶಗಳು ಪ್ರಧಾನವಾಗಿ ಇಂತಹ ನಿಲುವಿಗೆ ಕಾರಣ ಎನ್ನುವುದು ಮೇಲುನೋಟಕ್ಕೆ ಗೋಚರಿಸಬಹುದಾದ ಸತ್ಯವಾಗಿದೆ. ಕಲೆಯ ಬಗ್ಗೆ ಅದರಲ್ಲೂ ಕವಿತೆಯ ಅತೀಂದ್ರಿಯ ಗುಣದ ಬಗ್ಗೆ ನವ್ಯರಲ್ಲೂ ಇದ್ದಿರಬಹುದಾದ ಹಾಗು ಇದ್ದ ಒಂದು ಕಾಲ್ಪನಿಕ ಸ್ಥಿತಿಯೇ ಕಾರಣವಾಗಿದ್ದು ಸರ್ವವಿದಿತವಾದ ಸಂಗತಿ.

ಅಡಿಗರ ಒಟ್ಟೂ ಕವಿತೆಗಳನ್ನು ನೋಡಿದಾಗ ಅನೇಕ ವಿಭಿನ್ನ ಮತ್ತು ಕನ್ನಡದ ನೆಲಕ್ಕೆ ಸಂಬಂಧಿಸಿದ ಸಂಗತಿಗಳು ಗೋಚರವಾಗುತ್ತವೆ. ಒಂದು ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಬಂದಿರುವ ಅನೇಕ ಚಿಂತನೆಗಳನ್ನು ಅವರು ರೂಪಕ, ಉಪಮೆ ಮತ್ತು ಪ್ರತಿಮೆಗಳಲ್ಲಿ ಹಿಡಿಯಲು ಯತ್ನಿಸುತ್ತಾರೆ. ಆಧುನಿಕ ಜಗತ್ತಿನ ಕ್ರೂರತ್ವ ಮತ್ತು ಸಹಜತ್ವಗಳ ಜೊತೆಗೆ ಪರಂಪರೆಯ ಅಂತರಾಳದಿಂದಲೂ ತೆಗೆದುಕೊಂಡು ಅವುಗಳ ವಿಶಿಷ್ಟವಾದ ಸಂರಚನೆಯಲ್ಲಿ ಸ್ಫೋಟಕ ಸಂಗತಿಗಳನ್ನು ಹೇಳಲು ಹೊರಡುತ್ತಾರೆ. ಇಂತಹ ಸಂರಚನೆಯನ್ನು ಕುಮಾರವ್ಯಾಸ, ಪಂಪ, ಬೇಂದ್ರೆ ದೇವನೂರು ಮಹಾದೇವ ಮೊದಲಾದರಲ್ಲೂ ಕಾಣುತ್ತೇವೆ. ಕವಿತೆಯೊಂದರ ವಸ್ತು ಯಾವುದೇ ಇರಬಹುದು; ಅದು ತೆರೆದುಕೊಳ್ಳುವ ಭಿತ್ತಿ ಮಾತ್ರ ಯಾವ ಕಾಲಕ್ಕೂ ಒಂದೇ ಆಗಿರುತ್ತದೆ. ಹೀಗಾಗಿ ಪ್ರತಿಯೊಬ್ಬ ಕವಿಯೂ ಬಂಧಕ್ಕೆ, ಭಾವಕ್ಕೆ, ಭಾಷೆಗೆ ಸಂಬಂಧವನ್ನು ಕಲ್ಪಿಸುವ ಕೆಲಸಕ್ಕೆ ತೊಡಗುತ್ತಾನೆ. ಅಲ್ಲಿ ತನ್ನ ಕಸುಬುಗಾರಿಕೆಯ ಅನಂತತೆಯನ್ನು ಬಿಂಬಿಸುವ ಪ್ರಯತ್ನವನ್ನು ಮಾಡುತ್ತಾನೆ.

ಭಾರತೀಯವಾದ ಕಾವ್ಯಗಳು ಎರಡು ವೈರುಧ್ಯಗಳ ಆಳದಲ್ಲೇ ಹುಟ್ಟಿರುವುದನ್ನು ಕಾಣುತ್ತೇವೆ. ಒಂದು ಒಳಿತು ಮತ್ತೊಂದು ಕೆಡಕು. ಕೆಡುಕು ಒಳಿತನ್ನು ಕೆಡಿಸುವುದರ ಕಡೆಗೇ ಇರುತ್ತದೆ. ಆದರೆ ಕೊನೆಗೂ ಗೆಲ್ಲುವುದು ಒಳಿತೇ. ಬಹುಶಃ ಆಧುನಿಕತೆ ಈ ಸಂರಚನೆಯನ್ನು ಕಾವ್ಯದಲ್ಲಿ ಕಟ್ಟಿಕೊಡುವಾಗ ಅದರಲ್ಲೂ ಅಡಿಗರ ಕಾವ್ಯದಲ್ಲಿ ಕಾಣಿಸಿಕೊಳ್ಳುವ ರೀತಿಯಲ್ಲಿ ಮಾಡಿಕೊಂಡ ಬದಲಾವಣೆಗಳೂ ಇನ್ನಷ್ಟು ಸಂಕೀರ್ಣವೂ ಸಂಘರ್ಷಯುತವೂ ಆಗಿರುವುದನ್ನು ಗಮನಿಸಬಹುದು.

ಅಡಿಗರ ಕಾವ್ಯದಲ್ಲಿ ಕಾಣಸಿಕೊಳ್ಳುವ ಈ ಸಂಘರ್ಷದ ಸ್ವರೂಪಗಳನ್ನು ಹೀಗೆ ಪಟ್ಟಿ ಮಾಡಬಹುದು.

1. ಆಧುನಿಕತೆ ಮತ್ತು ಆರ್ಷೇಯವಾದ ಸಂಗತಿಗಳನ್ನು ಒಟ್ಟಿಗೆ ಇಟ್ಟಾಗಿನ ಸಂಘರ್ಷದ ಸ್ವರೂಪ.
2. ಆದರ್ಶ ಮತ್ತು ನಂಬಿಕೆಗಳ ನಡುವೆ ಉಂಟಾಗಬಹುದಾದ ಸಂಘರ್ಷ
3. ಲೌಕಿಕ ಮತ್ತು ಆಧ್ಯಾತ್ಮಿಕತೆಯ ನಡುವೆ ಇರಬಹುದಾದ ಸಂಘರ್ಷ
4. ಪ್ರಸ್ತುತ ಬದುಕಿನ ಅಂತರಾಳದಲ್ಲೇ ಇರಬಹುದಾದ ಘಟನೆ ಮತ್ತು ವಿಘಟನೆಯ ನಡುವಣ ಸಂಘರ್ಷ

ಇವು ಅಡಿಗರ ಕಾವ್ಯದ ಪ್ರಧಾನ ಭೂಮಿಕೆಗಳಾಗಿ ಕಾಣುತ್ತವೆ. ಅಡಿಗರ ಪ್ರತಿಮೆ, ರೂಪಕಗಳಲ್ಲಿ ಪ್ರಧಾನವಾಗಿ ಕಾಣುವುದು ಈ ಬಗೆಯ ಚಿತ್ರಗಳಿಂದಲೇ. ಹೀಗಾಗಿ ಅಡಿಗರ ಕಾವ್ಯ ಪ್ರತಿಮೆಗಳು ಈ ನಿಟ್ಟಿನಲ್ಲಿ ಹುಡುಕಾಟಕ್ಕೆ ಇಳಿದುಬಿಡುತ್ತವೆ.

ಅಡಿಗರು ರೂಪಿಸಿಕೊಳ್ಳುವ ಕಾವ್ಯದ ತಳಹದಿಯ ಬಗ್ಗೆ ಒಂದೆರಡು ಮಾತುಗಳನ್ನು ಹೇಳಿ ಮುಂದುವರೆಯಬಹುದು. ಅಡಿಗರ ನವ್ಯ ಅದು ಪಾಶ್ಚಾತ್ಯ ನವ್ಯ ಮಾತ್ರವಾಗಿರದೆ ಪ್ರಸಕ್ತ ವಿದ್ಯಮಾನಗಳ, ಚಿಂತನೆಗಳ ಮತ್ತು ತಮ್ಮ ಹಿಂದೆ ಆಗಿಹೋದ ಅನೇಕ ಚಿಂತನಾಧಾರೆಯನ್ನು ಪ್ರಧಾನವಾಗಿ ಇರಿಸಿಕೊಂಡಿದೆ. ಒದಿನ ಸುಗ್ಗಿಗೆ ಒಮ್ಮೆಲೇ ತೆರೆದುಕೊಂಡ, ಅನೇಕ ಸಂಗತಿಗಳನ್ನು ಬೆರಗಿನಿಂದಲೇ ಕಾಣುವ ಅಪೂರ್ವತೆಯನ್ನು ಅಡಿಗರ ಕಾವ್ಯ ಸಾಧಿಸುತ್ತದೆ. ಹೀಗಾಗಿ ಅಡಿಗರು ಯಾರನ್ನು ಒಪ್ಪುತ್ತಾರೆ ಅಂಥವರ ಪ್ರಭಾವ ಎಲ್ಲಿ ದಟ್ಟವಾಗಿ ಕಾಣುತ್ತದೆ ಎನ್ನುವುದನ್ನು ಅಷ್ಟೇ ಸ್ಪಷ್ಟವಾಗಿ ಹೇಳಲು ಬರುವುದಿಲ್ಲ. ಅಡಿಗರೇ ತಮ್ಮ ಬರಹಗಳಲ್ಲಿ ಒಂದು ಕಡೆ ಹೇಳುತ್ತಾರೆ: ನನಗೆ ಬೇಕಾದ್ದನ್ನು ಬೇಕಾದಷ್ಟನ್ನು ಮಾತ್ರ ಪಾಶ್ಚಾತ್ಯರಿಂದ ತೆಗೆದುಕೊಂಡೆ' ಎಂದು. ಅಲ್ಲಿನ ಪಾಶ್ಚಾತ್ಯರಿಂದ ತೆಗೆದುಕೊಂಡಿದ್ದನ್ನು ಇಲ್ಲಿಗೆ ಹೊಂದಿಸುವುದರ ಬಗ್ಗೆ ಅಡಿಗರು ಹೇಗೆಲ್ಲಾ ಚಿಂತಿಸಿರಬಹುದು ಎನ್ನುವುದು ಮತ್ತೊಂದು ಜಿಜ್ಞಾಸೆಯ ಅಂತವೇ ಆಗಿದೆ. ಹೀಗಾಗಿ ಅಡಿಗರ ಚಿಂತನೆಗಳಲ್ಲಿ ಅನನ್ಯ ಮಾದರಿಯೊಂದು ಗೋಚರವಾಗುತ್ತದೆ.

ಉದಾಹರಣೆಯಾಗಿ ಅಡಿಗರ ಕೆಲ ಪದ್ಯಗಳನ್ನು ನೋಡಬಹುದು. ಅವರ 'ಪ್ರಾರ್ಥನೆ' ಪದ್ಯದಲ್ಲಿ ಆಧ್ಯಾತ್ಮಿಕತೆ ಮತ್ತು ಲೈಂಗಿಕತೆಗಳ ವೈರುಧ್ಯ, ಪ್ರತಿಮೆಗಳ ಮೂಲಕ ಕಟ್ಟಿಕೊಡುವ ಸಡುಗೆಯಲ್ಲಿ ಲಾರೆನ್ಸ್‌ನ ಕೆಲ ಸಂಗತಿಗಳು ಕಾಣುತ್ತವೆ. ಆದರೂ ಅಲ್ಲಿ

ಶಿಶುನಾಳ ಷರೀಫರ ಅಭಿವ್ಯಕ್ತಿಯ ಕ್ರಮವೂ ಒಂದಿದೆ ಎನ್ನುವುದನ್ನೂ ಮರೆಯಲಾಗದು. ಆದರೆ ಷರೀಫರ ಕವಿತೆಗಳ ಸರಳತೆಯ ಸ್ಥಿತಿಯನ್ನು ಮೀರಿ ಇಲ್ಲಿ ಬೇರೆಯದ್ದೇ ಜಗತ್ತು ನಿರ್ಮಾಣವಾಗುವುದನ್ನು ಕಾಣಬಹುದಾಗಿದೆ. ಜೊತೆಗೆ ವಚನಗಳ ವಿನ್ಯಾಸ ಕ್ರಮವೂ ಕಾಣಸಿಗುತ್ತದೆ. ಯಾಕೆ ಹೀಗೆ ಅನೇಕ ಸಂಗತಿಗಳ ನಡುವೆ ಮೈತ್ರಿಯ ನಿಲುವಿಗೆ ಅಡಿಗರು ಬರುತ್ತಾರೆ ಎನ್ನುವುದು ತುಂಬು ಕುತೂಹಲದ ಸಂಗತಿಯೇ ಸರಿ. ಆದರೂ ಒಂದು ಸಂಗತಿ ಇಲ್ಲಿ ಸ್ಪಷ್ಟ ಲಾರೆನ್ಸ್‌ನಂತೆ ಲೈಂಗಿಕತೆಯನ್ನು ಆಧ್ಯಾತ್ಮದ ಎತ್ತರಕ್ಕೆ ಏರಿಸುವುದು ಅಡಿಗರಿಗೆ ಸಾಧ್ಯವಿಲ್ಲ. ಅವರಿಗೆ ಕಾಣುವ ಆಧ್ಯಾತ್ಮದ ಮಾದರಿಗಳೇ ಬೇರೆಯದ್ದು ಮತ್ತು ಅದು ಒಂದು ಪರಂಪರೆಯ, ಚಿಂತನೆಯ ಫಲವಾಗಿ ದಕ್ಕಿರುವಂಥದ್ದೇ ಆಗಿದೆ.

ಕ್ಷಣದ ಸಾರ್ಥಕ ರತಿಗೆ
ಮಾಸಗಳ, ವರ್ಷ ವರ್ಷ ಶತಮಾನಗಳ
ವಿರತಿ, ಸಮರತಿ; ವಿಕೃತರತಿ. ತುಂಬಿ ನವಮಾಸ
ಬರುವ ಜೀವಪವಾಡ ಕೆಲಸ ಕಲಿಸೋ ತಂದೆ

ರತಿಯೂ ಜೀವದ ಹುಟ್ಟಿನಲ್ಲಿ ಪರ್ಯಾವಸನವಾಗುವ ಭಾರತೀಯ ಕಲ್ಪನೆಯನ್ನು ಅಡಿಗರು ಕೈಬಿಡರು. ಯಾವ ಕ್ರಿಯೆಯೂ ಪೂರ್ಣತ್ವದೆಡೆಗಿನ ತುಡಿತ ಎನ್ನುವುದನ್ನು ನಂಬುವ ಅಡಿಗರು, ಅದೇ ಪದ್ಯದಲ್ಲಿ ಪರಂಗಿ ರೋಗ ತಗುಲದ ಹಾಗೆ ಉಳಿಸು ಪೂರ್ವಾರ್ಜಿತ ರತಿವಿವೇಕದ ಶಿಖೆಯ ಎನ್ನುತ್ತಾರೆ. ಇದು ಬೆಳವಣಿಗೆಯ ಸಹಜತ್ವದಸ್ಥಿತಿಯನ್ನು ಹೇಳುತ್ತದೆ. ನೇರವಾಗಿ ಏನನ್ನೂ ಹೇಳದಿದ್ದರೂ ಪಾಂಡುವಿನ ಕಥೆಯ ಕಡೆಗೆ ಕವಿತೆ ತಾಕುತ್ತದೆ. ಕವಿತೆಯ 'ಕಲಿಸು ಬಾಗದೇ ಸೆಟೆಯುವುದನ್ನು, ಬಾಗುವುದನ್ನೂ' ಎನ್ನುವ ಸಾಲುಗಳಲ್ಲಿ ವ್ಯಕ್ತಿಗೆ ಇರಬೇಕಾದ ನಮ್ರತೆ ಮತ್ತು ದೃಢತೆಯನ್ನು ಒಟ್ಟಿಗೆ ಕಾಣಿಸುವ ಯತ್ನವೂ ಅಡಗಿದೆ. ಎಲ್ಲ ಅನುಭವಗಳನ್ನು ಅನುಭವಿಸಿಯೇ ಅದರಾಚೆಗೆ ಬೆಳಯಬೇಕಿರುವ ಅನಿವಾರ್ಯತೆಯನ್ನು ಅಂಥ ಸಹಜ ಬೆಳವಣಿಗೆಯತ್ತ ವ್ಯಕ್ತಿ ಮುಖಮಾಡಲೇಬೇಕೆಂಬ ಆಶಯ ಈ ಕವಿತೆಯದ್ದಾಗಿದೆ.

'ಭೂಮಿಗೀತ'ದ ಉದ್ದಕ್ಕೂ ಕಾಣುವ ಸಂಪ್ರದಾಯ ಮತ್ತು ಆಧುನಿಕ ಜಗತ್ತಿನ ನಡುವಣ ತಿಕ್ಕಾಟದ ಒಳಗೇ ರೂಪುಗೊಂಡ ಪ್ರತಿಮೆಗಳು ಕಾಣುತ್ತದೆ. ಕಾಲಚಕ್ರದ ಇಡೀ ಓಟದಲ್ಲಿ ತಾನು ನಿಂತ ನೆಲೆಯಾವುದು? ಎಂಬುದು ಭೂಮಿಗೀತದ ನಾಯಕನ

ಪ್ರಶ್ನೆ. ತನ್ನ ಅನುಭವದ ಪರಿಧಿಯೊಳಗೆ ಜೀವಕೋಟಿಯ ಸೃಷ್ಟಿ ಲಯಗಳಿಗೆ ಸಂಬಂಧಿಸಿದ ಅಡಿಗರ ಒಟ್ಟು ಪದ್ಯಗಳು ಭೂಮಿಯ ಸಂಬಂಧ ಮತ್ತು ಬಿಡುಗಡೆಯ ತುಡಿತದಿಂದಲೇ ಹುಟ್ಟಿಕೊಂಡಿವೆ. ಇರುವ ಮತ್ತು ಇರುವುದರಾಚೆಗಿನ, ವಾಸ್ತವ ಮತ್ತು ಆದರ್ಶಗಳ ನಡುವಣ ನಿಯತವಾದ ಗತಿಯನ್ನು ಈ ಪದ್ಯಗಳು ನಿರ್ದೇಶಿಸುತ್ತವೆ. ಅಂತೆಯೇ ಹಿಮಗಿರಿಯ ಕಂದರದ ಈ ಸಾಲುಗಳೂ-

ಭಗ್ನಸೇತುವೆಯಾಚೆ ರೈಲು ನಿಂತು
ಸೀಟಿ ಹಾಕಿತು ಮೂರುಬಾರಿ; ಹಿಂದೆ ಹಿಂದೆ
ಮುಚ್ಚಿದೆವೆಮೇಲೆ ತಂಗಾಳಿ ತಿಂಗಳನು ಲೇಪಿಸುವ
ಪರ್ಣಕುಟಿಯಾದ, ಹಿಮಗಿರಿಯ ಬಗೆಗಿನ ಕನಸು.

ಇಂಥದ್ದೇ ನಿಲುವುಗಳನ್ನು ಹೇಳುತ್ತವೆ. ಆಧುನಿಕ ಜಗತ್ತಿನ ವಿದ್ಯಮಾನಗಳು ತನ್ನದೇ ಅರ್ವಾಚೀನ ಸಂಸ್ಕೃತಿಯ ಬೇರುಗಳಿಂದ ದೂರ ಸಾಗದೆ ಕ್ರಿಮೊಂದು ಕಸಿಯ ಕೆಲಸಕ್ಕೆ ಇಳಿಯುತ್ತವೆ. ಆಧುನಿಕ ನಗರ ಜೀವನದ ಆಕರ್ಷಣೆ ಮತ್ತು ವಿಕರ್ಷಣೆಯ ನಡುವೆ ಇರಬಹುದಾದ ಸಂಗತಿಗಳನ್ನು ತೆರೆದಿಡುವ ಪ್ರಯತ್ನಕ್ಕೆ ಅಡಿಗರು ತೊಡಗುತ್ತಾರೆ. ಅದಕ್ಕೆ ಉದಾಹರಣೆಯಾಗಿ ಈ ಸಾಲುಗಳನ್ನು ಗಮನಿಸಬಹುದು.

ಹುತ್ತಗಟ್ಟದೆ ಚಿತ್ತ ಕೆತ್ತೀತೇನು
ಪುರುಷೋತ್ತಮನ ಆ ಅಂಥ ರೂಪ- ರೇಖೆ?

ನಾನು ಹಿಂದೂ, ನಾನು ಬ್ರಾಹ್ಮಣ ಎಂದು ಹೇಳುವ ಮೂಲಕ ಅಡಿಗರು ವ್ಯಕ್ತಿ ತನ್ನ ಪಥಕ್ರಮದಲ್ಲಿ ಅನಿವಾರ್ಯವಾಗಿ ಎದುರಿಸಲೇ ಬೇಕಾದ ನಮ್ಮ ಸಮಾಜದ ಸಂಗತಿಗಳನ್ನು ಕಂಡರಿಸಿದ್ದಾರೆ. ಆದರೆ-

'ತೊಟ್ಟಿಲಂಗಡಿಯಲ್ಲಿ ಬೊಂಬು ತುಂಬಾ ಅಗ್ಗ ಜಾತಕ ಕರ್ಮಾದಿ ನಿರತ ಪುರೋಹಿತ ಅಪರ ಪ್ರಯೋಗದಲಿ ಪಾರಂಗತ' ಎನ್ನುವ ವ್ಯಂಗ್ಯ ಮಾತ್ರ ಸದಾ ತಿವಿಯುವಂತೆ ಮಾಡುತ್ತದೆ. ಅವರೆ ಸಂಸ್ಕೃತಿಯ ಜೀವ ಎಂದೂ ಬತ್ತಲಾರದ ಗಂಗೆ ಎಂಬುದನ್ನೂ ಅವರು ಎತ್ತಿ ಹೇಳುತ್ತಾರೆ.

ಅಡಿಗರ ಸಮಕಾಲೀನ ಪ್ರಜ್ಞೆ ದಟ್ಟೈಸಿರುವುದು ಅವರ ರಾಜಕೀಯ ನಿಲುವಿನ ಪದ್ಯಗಳಲ್ಲಿ. ಅಂತಲ್ಲಿ ಅವರು ಕಾವ್ಯದ ಅಂತರ್ಮುಖತೆಯನ್ನು ಮೀರಲು

ಯತ್ನಿಸುತ್ತಾರೆ. ಅವರ ಪದ್ಯಗಳ ರಾಜಕೀಯ ನಿಲುವು ನೇರ ಮತ್ತು ಪರೋಕ್ಷ ರಾಜಕಾರಣದ ಎರಡು ಮಜಲುಗಳಲ್ಲಿ ತೆರೆದುಕೊಳ್ಳುತ್ತದೆ.

ಯಾವ ಕಾಲವೂ ಗುಣವೋ ಕರ್ಮವೋ ನಿರ್ಧರಿಸದೀ ಗೆರೆಗಳು
ಮಾಸುತ್ತಿವೆ ಅಳಿಯುತ್ತಲಿವೆ, ಹೊಳೆಯುತ್ತಲಿವೆ ಹೊಸ ಗುರಿಗಳು
ಕಾಲಕಾಲಕೆ ಬೇರೆ ಭೂಪಟ, ಮೂಡುತ್ತಲಿವೆ ಹೊಸ ಗೆರೆಗಳು–

–'ನಾನು ಹಿಂದೂ ನಾನು ಬ್ರಾಹ್ಮಣ'

ಕುರುಕ್ಷೇತ್ರ ಚಾಚುತ್ತಲಿದೆ ದೇಶದುದ್ದಕ್ಕೂ ಪಾತ್ರಗಳೇನೋ
ಅವೇ; ಪಾತ್ರಧಾರಿಗಳು ಬೇರೆ ಬೇರೆ
ದುರ್ಯೋಧನನಿಗೆ ಯುಧಿಷ್ಠಿರ ವೇಷ, ಶಕುನಿಯೇ
ಶ್ರೀಕೃಷ್ಣ; ಪಾರ್ಥನ ವೇಷ ಉತ್ತರನಿಗೆ

–'ಬತ್ತಲಾರದ ಗಂಗೆ'

ಇಂಥಲ್ಲಿ ಅಡಿಗರ ರಾಜಕೀಯ ನಿಲುವುಗಳು ಢಾಳಾಗಿ ಕಾಣುತ್ತವೆ.

ಅಡಿಗರು ಶುದ್ಧ ಐಂದ್ರಿಕತೆಯನ್ನು ಮೀರಿದ ಭಾವತಂತುವನ್ನು, ವಾಸ್ತವತೆಯ ನಿಷ್ಠುರತೆಯನ್ನೂ ಮೇಳೈಸುವ ಪ್ರಯತ್ನದಲ್ಲಿ ತೊಡಗುತ್ತಾರೆ. ಹೀಗಾಗಿ ಭಾರತೀಯತೆ, ನಮ್ಮತನ ಎನ್ನುವಲ್ಲಿ ಉಪಾಸನಾ ದೃಷ್ಟಿಯನ್ನು ಮೀರಿ ಬೆಳೆಯುವ ಯತ್ನವನ್ನು ಮಾಡುತ್ತವೆ ಅವರ ಕವಿತೆಗಳು. ಹೀಗಾಗಿ ಸಾಹಿತ್ಯ ಎನ್ನುವುದನ್ನು ಅವರು ವ್ಯಾಖ್ಯಾನವೆಂದಾಗಲೀ, ಮೌಲ್ಯ ನಿರ್ಣಯಗಳ ಸಂಗತಿ ಎಂದಾಗಲೀ ಪರಿಗಣಿಸದೆ– 'ಕಾವ್ಯವೆಂದರೆ ಒಂದು ನೈತಿಕ ನಿಲುವು' ಎಂದು ಪ್ರತಿಪಾದಿಸುತ್ತಾರೆ. ಹೀಗಾಗಿ ಅಡಿಗರಲ್ಲಿ ಕಾವ್ಯದ ಹೊರರೂಪಕ್ಕೆ ದಕ್ಕುವಷ್ಟೇ ಪ್ರಾಮುಖ್ಯತೆ ಅದರ ಆತ್ಮಕ್ಕೆ ಕೂಡಾ ದೊರಕುತ್ತದೆ.

ಅಡಿಗರು ಸಾಧಿಸಿದ ಮತ್ತೊಂದು ಪ್ರಧಾನವಾದ ಅಂಶ ಭಾಷೆಯದ್ದು. ಕಟ್ಟುವ ಕ್ರಮದಲ್ಲಿ ಅವರು ತೆಗೆದುಕೊಳ್ಳುವ ಎಚ್ಚರ, ಲಯರಹಿತ ಕಥನವಲ್ಲದ ಮಾದರಿಯನ್ನು ವೈಯಕ್ತಿಕ ಬದುಕಿನ ಆಧಾರದ ಮೇಲೆ ಕಟ್ಟಿಕೊಡುವ ಯತ್ನ ಅಡಿಗರ ವಿಶೇಷತೆ ಎಂದೇ ಹೇಳಬೇಕು. ವ್ಯಕ್ತಿ ಮತ್ತು ಸೃಷ್ಟಿಕ್ರಿಯೆಯ ನಡುವಣ ಸಾವಯವ ಸಂಬಂಧದಲ್ಲಿ ಜನ್ಮ ತಳೆಯುವ ಕೃತಿಯು, ಒಟ್ಟಾರೆ ರೂಪ ನಿರ್ಧರಿಸಬಹುದಾದ ಭಾಷೆ, ಕಾವ್ಯದಲ್ಲಿ ಎಂದೂ ತಾಂತ್ರಿಕವಾದ ಸಂಗತಿಯಾಗಬಾರದು ಎನ್ನುವ ಎಚ್ಚರ ಅಡಿಗರಿಗೆ ಆರಂಭದಿಂದಲೂ

ಇತ್ತು. 'ನನ್ನ ನುಡಿ'ಗಾಗಿ ಹಂಬಲಿಸುವ ಅಡಿಗರು ಅದು ಯಾರೋ ಕೊಟ್ಟ ಭಾಷೆಯಾಗಬಾರದು ಎಂದು ಹಂಬಲಿಸುತ್ತಾರೆ. ಇದು ಪ್ರತಿಯೊಬ್ಬ ಕಲಾಕಾರನ ಹಂಬಲವೂ ಹೌದು. ಅಡಿಗರು ಹೇಳುವ 'ನನ್ನತನ' ಎನ್ನುವುದು ಕನ್ನಡ ಸಂಸ್ಕೃತಿಯೊಳಗಿನ ಮಾತಾಗಿ ಕೇಳುತ್ತದೆ. ಇದು ಕನ್ನಡ ಸಾಹಿತ್ಯದಲ್ಲಿ ನಿರಂತರವಾಗಿ ಕೇಳುತ್ತಲೇ ಇರುವ ಪ್ರಶ್ನೆ. ಒಂದು ಕಾಲಕ್ಕೆ ಸಂಸ್ಕೃತ, ಐರೋಪ್ಯ ಜಗತ್ತಿನ ಮೂಲಕ ಬಂದಿದ್ದು ಮಾತ್ರವಾಗಿತ್ತು. ಆದರೆ ಇಂದು ಸಂಪರ್ಕ ಸಾಧನಗಳು ಇಂಟರ್ ನೆಟ್‌ಗಳ ಮೂಲಕ ತಂದು ಸುರಿಯುತ್ತಿರುವ ವಿಚಾರಗಳನ್ನು ಕಂಡಾಗ ನಿಜಕ್ಕೂ ಹೆದರಿಕೆಯಾಗುತ್ತದೆ. ಅಡಿಗರು ತಮಗೆ ಬೇಕಾದಷ್ಟನ್ನು ಬೇಕಾದ ಹಾಗೆ ಕಂಡರಿಸುವ ಸ್ವಾತಂತ್ರ್ಯ ಹೊಂದಿದ್ದರು. ಅಂಥ ಅವಕಾಶವೂ ನಮಗೆ ಇಂದು ಇಲ್ಲ. ಈಗ 'ನಮ್ಮತನ'ದ ಹುಡುಕಾಟ ಮಹತ್ವಪೂರ್ಣವಾದದ್ದು. ಹೀಗಾಗಿ ಅಡಿಗರು ಇನ್ನಷ್ಟು ಜೀವಂತ ಎನ್ನಿಸಿದರೆ ಅಚ್ಚರಿಯಿಲ್ಲ.



ಬೇಂದ್ರೆಯವರ ತರುವಾಯ ಅಷ್ಟೇ ಸಾಮರ್ಥ್ಯವುಳ್ಳ ಪ್ರತಿಭೆಯೆಂದರೆ ಅಡಿಗರದೇ. ಈ ಪ್ರತಿಭೆ ಬೇಂದ್ರೆಯವರ ಪ್ರತಿಭೆಯಷ್ಟೇ ಸಂಕೀರ್ಣತೆಯಿಂದ ಕೂಡಿದ್ದಾಗಿದೆ.

**- ಕೀರ್ತಿನಾಥ ಕುರ್ತಕೋಟಿ**

**(ಹಿರಿಯ ವಿಮರ್ಶಕರು)**

# ಅಡಿಗರ 'ಆಗಬೋಟಿ' - ಒಂದು ಪಕ್ಷಿನೋಟ

**-ಬಿ.ಎ.ಕೆದಿಲಾಯ**

ಅಡಿಗರ ಕಾವ್ಯವಸ್ತುಗಳಲ್ಲಿ ಸಾಂಸ್ಕೃತಿಕ ಕಾಳಜಿ ಹಾಗೂ ಸಂಸ್ಕೃತಿಯ ವಿಮರ್ಶೆ ಪ್ರಮುಖವಾದವು. ಭಾರತೀಯ ಸಂಸ್ಕೃತಿಯ ವಿಭಿನ್ನ ಅಂಶಗಳನ್ನು ಆಳವಾಗಿ ವಿಶ್ಲೇಷಿಸಿ, ಸಮಗ್ರ ದೃಷ್ಟಿಯಿಂದ ಪರಿಭಾವಿಸಿ ಅವುಗಳಲ್ಲಿ ನಮ್ಮ ಇಂದಿನ ಕಾಲಕ್ಕೆ ಅಪ್ರಸ್ತುತವೂ ಅನಿಷ್ಟಕರವೂ ಆದ ಅಂಶಗಳನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸುವುದು ಹಾಗೂ ಪ್ರಸ್ತುತವೂ, ಅರ್ಥಪೂರ್ಣವೂ ಆಗಿರುವ ಅಂಶಗಳನ್ನು ಸ್ವೀಕರಿಸುವುದು ನಮ್ಮ ಸಾಂಸ್ಕೃತಿಕ ಪರಂಪರೆಯ ಬಗೆಗಿನ ಅವರ ಧೋರಣೆಯ ತಿರುಳಾಗಿದೆ ಎಂದು ಹೇಳಬಹುದು. ಯಾವುದೇ ಕಾವ್ಯದ ಆಳದಲ್ಲಿ ಅದರ ವಸ್ತುವಿನ ಕುರಿತು ಕವಿಗೆ ತನ್ನದೇ ಆದ ಒಂದು ವಿಶಿಷ್ಟ ಗ್ರಹಿಕೆ ಇರುತ್ತದೆ. ಅದು ಸರ್ವ ಸಮ್ಮತವಾಗಬೇಕೆಂದೇನೂ ಇಲ್ಲ. ಅಂಥ ಗ್ರಹಿಕೆ ತಕ್ಕ ಭಾಷೆಯಲ್ಲಿ, ಶಬ್ದಗಳಲ್ಲಿ, ಪ್ರತಿಮೆಗಳಲ್ಲಿ ಪರಿಣಾಮಕಾರಿಯಾಗಿ ಮೈತಾಳಿದಾಗ ಕಾವ್ಯ ಯಶಸ್ವಿಯಾಗುತ್ತದೆ. 'ಆಗಬೋಟಿ' ಕವನದ ಹಿನ್ನೆಲೆಯಲ್ಲಿ ನಮ್ಮ ಸಂಸ್ಕೃತಿ ಕೆಲವು ಸಾವಿರ ವರ್ಷಗಳಿಂದ ಚಲನಶೀಲವಾಗಿತ್ತಾದರೂ ಸುಮಾರು ಒಂದು ಸಾವಿರ ವರ್ಷ ಹಿಂದೆ ಯಾವುದೋ ಕಾರಣಗಳಿಂದ ಸ್ಥಗಿತಗೊಂಡು ನಿಧಾನವಾಗಿ ಕೊಳೆಯತೊಡಗಿತು - ಎಂಬ ಗ್ರಹಿಕೆ ಇದೆ. ಅನಂತರದ ಕಾಲಖಂಡದಲ್ಲಿ ಹಿಂದೆ ನಡೆದ (ರಾಮಾಯಣ ಮಹಾಭಾರತಗಳಂಥ)ದ್ದರ ಪುನರಾವರ್ತನೆಯೇ ಹೆಚ್ಚಾಯಿತೇ ಹೊರತು ಮೌಲಿಕವಾದ ಸೃಜನಶೀಲತೆಯ ಕೆಲಸ ಬಹುಮಟ್ಟಿಗೆ ನಡೆಯಲಿಲ್ಲ ಎನ್ನುವುದು ಅವರ ಅನಿಸಿಕೆ. ಲಂಗರು ಹಾಕಿ, ಪಯಣ ನಿಲ್ಲಿಸಿ, ನಿಶ್ಚಲವಾಗಿ ಬಿಟ್ಟಿರುವ 'ಆಗ ಬೋಟಿ' (ಆಗ್ ಬೋಟ್ = ಉಗಿಹಡಗು) ಈ ಗ್ರಹಿಕೆಯ ಕೇಂದ್ರ ಪ್ರತಿಮೆ ಕವನದಲ್ಲಿ ವಿಜೃಂಭಿಸಿದೆ.

'ಆಗಬೋಟಿ' ಎಂಬ ಶಬ್ದದಲ್ಲಿರುವ ಶ್ಲೇಷೆಯೇ ಕವನದ ವಸ್ತುವನ್ನು ಒಂದು ರೀತಿಯಲ್ಲಿ ಧ್ವನಿಸುತ್ತದೆ. 'ಆಗ' ಅಂದರೆ ಹಿಂದೆ, ಒಂದಾನೊಂದು ಕಾಲದಲ್ಲಿ, ಇದು ಬೋಟಿ (ಹಡಗು) ಆಗಿತ್ತು ಎನ್ನುವ ಅರ್ಥವನ್ನು ಧ್ವನಿಸುತ್ತದೆ. ಅರ್ಥಾತ್ ಈಗ ಅದು ಹಾಗಿಲ್ಲ ಎನ್ನುವುದನ್ನು ಸೂಚಿಸುತ್ತದೆ. ''ಹತ್ತು ಶತಮಾನಗಳ ಹಿಂದೆ ಲಂಗರು ಹಾಕಿ ನಿಲ್ಲಿಸಿದ್ದ ಈ ಆಗಬೋಟಿ ಬಿರುಗಾಳಿ ಬಂದಾಗ ಒಂದಿಷ್ಟು ಅಲುಗಾಡಿತ್ತಷ್ಟೆ'' ಎಂದು ಆರಂಭವಾಗಿ

**ಕೆಲವು ಶತಮಾನ ಕಾಲ ಹೊಗೆಯನುಗುಳುತ್ತಿತ್ತು**

**ಅನಂತರ ಯಂತ್ರ ನಿಸ್ತಂತ್ರ**

ಎಂಬ ಸಾಲುಗಳು ಚಲನ ಶಕ್ತಿಯನ್ನು ಕಳೆದುಕೊಂಡು ಸ್ಥಗಿತವಾಗಿರುವ ಸಂಸ್ಕೃತಿಯಿಂದ ಉತ್ಪನ್ನವಾಗಬಹುದಾದ ಅನಿಷ್ಟ ಪರಂಪರೆಯನ್ನು (ಹೊಗೆಯನ್ನುಗುಳುವುದು) ಸೂಚಿಸುತ್ತವೆ. ಅನಂತರ ಬರುವ

**ನೌಕೆಗಿಂತ ಲಂಗರೇ ಮುಖ್ಯವೆಂದು**

**ತಿಳಿದದ್ದು ನಮ್ಮ ವಿಶೇಷ.**

ಎಂಬ ನುಡಿ ಒಂದು ಅರ್ಥಸಮೃದ್ಧ ಮಹಾವಾಕ್ಯವಾಗಿದೆ. ನಮ್ಮ ಸಂಸ್ಕೃತಿಯಲ್ಲಿ ಧಾರಾಳವಾಗಿರುವ ನಿಷೇಧಾತ್ಮಕ, ನಕಾರಾತ್ಮಕ, ಜೀವ ವಿರೋಧಿ ಸಂಪ್ರದಾಯಗಳಿಂದಾಗಿರುವ ಅನಾಹುತಗಳ ಬಗ್ಗೆ ನಾವು ತಳೆದ ಧೋರಣೆಯನ್ನು ಇದು ಸಮರ್ಥವಾಗಿ ಸಂಕೇತಿಸುತ್ತದೆ. ನಮ್ಮ ವರ್ಣ, ಆಶ್ರಮ, ಜಾತಿ ಪ್ರಧಾನ ಸಂಸ್ಕೃತಿಯಲ್ಲಿ "ಅದನ್ನು ನೋಡಬಾರದು, ಇದನ್ನು ಮಾಡಬಾರದು, ಮತ್ತೊಂದನ್ನು ಕೇಳಬಾರದು, ಇಂಥವರನ್ನು ಮುಟ್ಟಬಾರದು, ಅಂಥಲ್ಲಿಗೆ ಹೋಗಬಾರದು, ಅದನ್ನು ತಿನ್ನಬಾರದು, ಇವರನ್ನು ಮದುವೆಯಾಗಬಾರದು" ಎಂಬಿತ್ಯಾದಿ ಸಾವಿರಾರು ನಿಷೇಧಗಳು (Taboos) ಹುಟ್ಟು ಹಾಕಿದ ದಮನ ಪರಂಪರೆಯಿಂದ ನಮ್ಮ ಸೃಜನಶೀಲತೆ, ಪ್ರಗತಿಶೀಲತೆ, ಚಲನಶೀಲತೆಗಳಿಗೆ ಆಘಾತವುಂಟಾಗಿ ಅವು ತಲೆಯೆತ್ತದಂತಾಯಿತು. ಅದೇ ವಿಶೇಷ ಸಾಧನೆಯೆಂದು ನಾವು ಹೆಮ್ಮೆ ಪಟ್ಟುಕೊಂಡೆವು. ಈ ನಕಾರಾತ್ಮಕ ಮನೋವೃತ್ತಿಯ ಪರಿಣಾಮಗಳನ್ನು ಮುಂದಿನ ಸಾಲುಗಳಲ್ಲಿ ಹೇಳಲಾಗಿದೆ. ಯಾನ ಮಾಡಬೇಕೆಂಬ, ಎತ್ತರದ ಶಿಖರವನ್ನೇರಬೇಕೆಂಬ, ದೂರ ತೀರವನ್ನು ಸೇರಬೇಕೆಂಬ ಆಕಾಂಕ್ಷೆಯೇ ಮಾಯವಾಯಿತು. ಇದ್ದಲ್ಲೇ ಇದ್ದು ಅಲ್ಲೇ ಊಟ ತಿಂಡಿ ಮಲಮೂತ್ರ ತೀಟೆ ತೀರಿಕೊಂಡು ವಾತಾವರಣವನ್ನು ಕೆಡಿಸಿ ಪೂರ್ವಿಕರು ಮಾಡಿಟ್ಟದನ್ನೇ ಬಳಸಿ ಹೇಗೋ ಬದುಕಿ ಉಳಿದದ್ದೇ ಸಾಧನೆ ಎನಿಸಿತು.

"ಭೂವಿವರ ಎಲ್ಲ ತಿಳಿದಿತ್ತು. ಏಳು ಸಮುದ್ರ, ಜಂಬೂದ್ವೀಪ ಇತ್ಯಾದಿಗಳ ಪಾಠ ನಡೆಯುತ್ತಲೇ ಇತ್ತು. ಆದರೂ ಪಕ್ಕದಲ್ಲೇ ಇದ್ದ ಜಲತರಂಗದ ಮೇಲೆ ಮೈಯಾಡಿಸಲು ಹುಮ್ಮಸ್ಸು ಮೂಡಲಿಲ್ಲವೇಕೆ?" ಎಂದು ಆರಂಭವಾಗುವ ಎರಡನೆಯ ಭಾಗದಲ್ಲಿ ಅಮೂರ್ತ ವಿಚಾರಗಳಲ್ಲಿ, ತರ್ಕವಿತರ್ಕಗಳಲ್ಲಿ, ಪುರಾತನ ಕಲ್ಪನೆಗಳಲ್ಲಿ ಮೈಮರೆತದ್ದು

ಪ್ರಕೃತಿಯ ಸವಾಲುಗಳಿಗೆ ಕ್ರಿಯಾತ್ಮಕವಾಗಿ ಸ್ಪಂದಿಸದೆ ಅರೆನಿದ್ದೆ ಮಂಪರಿನಲ್ಲಿದ್ದವರಂತೆ ಜಡರಾಗಿದ್ದದ್ದು ಗತಾನುಗತಿಕವಾದ ಅರ್ಥ ಹೀನ ಕಾಟಾಚಾರಗಳಲ್ಲಿ ಕಾಲಕಳೆದದ್ದು ಕವಿಯ ವಿಷಾದಕ್ಕೆ, ಟೀಕೆಗೆ ಗುರಿಯಾಗಿದೆ.

ಕವನದ ಮೂರನೆಯ ಭಾಗದಲ್ಲಿ ಆ ಕಾಲದ ಬುದ್ಧಿವಂತರೆನಿಸಿಕೊಂಡ ಪಂಡಿತವರ್ಗದ ಹುಂಬತನ ಚಿತ್ರಿತವಾಗಿದೆ. ಈ ವರ್ಗದ ಜನ ಹೊಸ ಸೃಷ್ಟಿಗಳನ್ನು ಮಾಡುವ ಗೊಡವೆಗೆ ಹೋಗದೆ ಆತ್ಮ ಪರಮಾತ್ಮಗಳ, ಅವತಾರಗಳ ಹಳೆಯ ಕಥೆ ಪುರಾಣಗಳನ್ನೇ ಮೆಲುಕು ಹಾಕುತ್ತಾ, ಅದಕ್ಕೇ ಕಾಲು - ಬಾಲ ಕೊಂಬು ಜುಟ್ಟು ಜೋಡಿಸುತ್ತಾ, ಅವುಗಳಿಂದಲೇ ಸಕಲಸಿದ್ಧಿ ಸಮೃದ್ಧಿಗಳು ಪ್ರಾಪ್ತವಾಗುತ್ತವೆಂದು ಬಡಬಡಿಸುತ್ತಾ ಚರ್ವಿತಚರ್ವಣ ಕಾರ್ಯದಲ್ಲಿ ನಿರತರಾದರು. ಹಳೆಯದಕ್ಕಿಂತ ಭಿನ್ನವಾದ, ಸ್ವಾನುಭವ ಪ್ರೇರಿತವಾದ ನವೀನ ಕೃತಿಗಳನ್ನು ಸೃಷ್ಟಿಸಲಾರದಿದ್ದರೂ ಪಾಂಡಿತ್ಯದ ಅಹಂಕಾರವನ್ನು ಬೆಳೆಸಿಕೊಂಡು ನಿಷ್ಕೃತ್ಯರಾದರು. ಬುದ್ಧಿ ಕೆಟ್ಟರೆ, ಹೃದಯವೂ ಕೆಡುತ್ತದೆ.

**ಕೊಳೆಯ ತೊಡಗಿದರೆ ಒಳ್ಳೆಯದು ಕೆಟ್ಟದ್ದು**
**ಎರಡೂ ಒಂದೇ, ಬರೀ ದುರ್ನಾತ**

ಇದೊಂದು ಮಹಾನ್ ಸತ್ಯ. ಈ ಮಾತಿನ ಅರ್ಥವ್ಯಾಪ್ತಿ, ಧ್ವನಿ ಸಮೃದ್ಧಿ ವಿಶಾಲವಾಗಿದೆ. ಒಂದು ಕಾಲದಲ್ಲಿ ಜೀವಂತವಾಗಿದ್ದು ಅತ್ಯಂತ ಶ್ರೇಷ್ಠವೆನಿಸಿದ್ದು ಕೂಡ ಜೀವ ಕಳೆದುಕೊಂಡು ಕೊಳೆಯತೊಡಗಿದ ಮೇಲೆ ದುರ್ವಾಸನೆಯನ್ನಷ್ಟೇ ಬೀರುತ್ತವೆಯಲ್ಲದೆ ಸುವಾಸನೆಯನ್ನಲ್ಲ. ಅರ್ಥ ಕಳೆದುಕೊಂಡ ಸಂಪ್ರದಾಯಗಳು, ಅಪ್ರಸ್ತುತ ಮೌಲ್ಯಗಳು, ಪೊಳ್ಳಾದ ಸಿದ್ಧಾಂತಗಳು ಉಳಿದುಕೊಂಡರೆ ಅದರಿಂದ ಸಮಾಜದ ವಾತಾವರಣ ಅಸಹನೀಯವೂ, ಅನಾರೋಗ್ಯಕರವೂ ಆಗುವುದು ಸಹಜ. ನಮಗೆ ಅತ್ಯಂತ ಪ್ರಿಯರಾಗಿದ್ದ ವ್ಯಕ್ತಿಗಳೂ ಮೃತರಾದ ಮೇಲೆ, ಪಾರ್ಥಿವ ದೇಹಗಳಾಗಿ ತ್ಯಾಜ್ಯರಾಗುತ್ತಾರಷ್ಟೆ

ಕವನದ ನಾಲ್ಕನೆಯ ಭಾಗದಲ್ಲಿ ''ಪಶ್ಚಿಮದ ಜಂಝೂವಾತ ಬಡಿದು, ಹಡಗು ಒಡೆದು, ಲಂಗರು ಕಿತ್ತು ತತ್ತರಿಸುತ್ತಿರುವ ಸನಾತನ ಯಂತ್ರ'ದ ಪ್ರತಿಮೆ ಕಣ್ಣಿಗೆ ಕಟ್ಟುವಂತೆ ಮೂಡಿಬಂದಿದೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಸನಾತನ ಸಂಸ್ಕೃತಿಯ ಮೇಲಾಗಿರುವ ಅಗಾಧ ಪರಿಣಾಮಗಳು, ತಲ್ಲಣಗಳು,ಸಮಸ್ಯೆಗಳು, ಪ್ರತಿಕ್ರಿಯೆಗಳು

ಇಲ್ಲಿ ಭಾವಾಭಿನಯಗೊಂಡಿವೆ. 'ಕೆಲವರು ಮುಳುಗಿದ್ದಾರೆ. ಕೆಲವರು ತೇಲುತ್ತಿದ್ದಾರೆ. ಬಹುಮಂದಿ ಹಡಗದ ಮರಗಳಲ್ಲಿ ಬಿದ್ದು ಎದ್ದು ತಲೆಗೆ ಕೈಯಿಟ್ಟು ಕುಳಿತಿದ್ದಾರೆ.'

ಇಂಥ ಕಿಂಕರ್ತವ್ಯವಿಮೂಢ ಸ್ಥಿತಿ ಇನ್ನೂ ಮುಂದುವರಿಯುವುದು ಸಲ್ಲದು. ಯಾನಕ್ಕೆ ಮತ್ತೆ ಕರೆಬಂದಿದೆ. ಸವಾಲುಗಳಿಗಂಜಿ ಸೋಂಬೇರಿಯಾಗಿ ಒಣಗುವುದು ತರವಲ್ಲ. ಕಾಲದ ಕರೆಯನ್ನು ಮುಂದಿನ ಸಾಲುಗಳು ಹೀಗೆ ಸೊಗಸಾಗಿ ಹೇಳುತ್ತವೆ.

**ಕರೆಯುತ್ತಲಿವೆ ದೂರ ದೂರ ಬಂದರು ಬಾಹು**
**ಜೀವರತ್ನಗಳು ಸಂಜೀವಿನಿ ಇರುವ ತಾವು**
**ಮುಗಿಲ ನೆಕ್ಕುವ ಶಿಖರ, ಸೌಗಂಧಿಕ ಸರೋವರ**
**ಮಾನಸ ಸ್ತರದಲ್ಲಿ ಹೊಳೆವ ಅತಿಮಾನಸದ ಸಾನು**
**ಹೊಸ ಲೋಕಗಳಿಗೆ ಹೊಸದಾರಿಗಳಿಗೆ ತೆರೆದಿದೆ ತೆರೆ**

ಕರೆಗಳಿಗೆ ಓಗೊಡಬೇಕು. ಸವಾಲುಗಳನ್ನು ಎದುರಿಸಬೇಕು. ಉತ್ತುಂಗ ಶಿಖರಗಳನ್ನೇರಬೇಕು. ಉತ್ತಮವಾದುದನ್ನು ಸಾಧಿಸಬೇಕು. ಅದಕ್ಕಾಗಿ ಹಳೆಯ ಹಲಗೆಗಳನ್ನು ಹಿಡಿದು ಬಡಿದು ಮಿಡಿದು ನೋಡುವ ಅಗತ್ಯವಿದೆ. ಅವುಗಳಲ್ಲಿ ಲಡ್ಡಾಗಿರುವುದನ್ನು ಬಿಟ್ಟು ಗಟ್ಟಿಯಾಗಿರುವುದನ್ನು ಬಳಸಿಕೊಳ್ಳಬಹುದು. ಪುರಾತನ ಹಡಗು ವಿದ್ಯೆಯನ್ನು ಇಂದಿನ ಪರಿಗೆ ಜೋಡಿಸಿ ಹೊಸ ನೌಕೆಯನ್ನು, ಹೊಸ ಯಂತ್ರ ತಂತ್ರಗಳನ್ನು ಸೃಷ್ಟಿಸಬೇಕು. ಅದರಲ್ಲಿ ಹೊಸಲಂಗರೂ ಇರುತ್ತದೆ. ಇರಬೇಕು. ಇಂಥ ಹೊಸ ನೌಕೆಯಲ್ಲಿ ನಮ್ಮ ಯಾನ ಹೀಗೆ ನಡೆಯಲಿ ಎನ್ನುತ್ತಾರೆ ಕವಿ:

**ಯಾನ ನಡೆಯಲಿ ತಂಗಿ ತಂಗಿ ಬಂದರಿನಲ್ಲಿ**
**ನವ ಖಂಡಗಳ ಶೋಧಿಸಿ ಪಾತಾಳದೆಡೆಗೆ**
**ಶಿಖರಗಳನಾಕ್ರಮಿಸಿ ಆಕಾಶದೆಡೆಗೆ**
**ಚಲನವೇ ಬದುಕು, ನಿಶ್ಚಲತೆ ಮರಣ**

ಹೀಗೆ ನಮ್ಮ ಸಂಸ್ಕೃತಿಯ ಭೂತಕಾಲದ ಏಳು ಬೀಳುಗಳು, ವರ್ತಮಾನದ ಅನುಭವಗಳು ಹಾಗೂ ಭವಿಷ್ಯದ ಕನಸು – ಇವೆಲ್ಲವೂ ಒಂದು ಸಂಕೀರ್ಣ ಸಾವಯವ ಶಿಲ್ಪದಲ್ಲಿ ಶಕ್ತಿಶಾಲಿ ಪ್ರತಿಮೆಗಳ ಮುಖಾಂತರ ಗಾಢ ಕಾವ್ಯಾನುಭವವಾಗಿ ಮೈಪಡೆಯುವ ನುಡಿ ಪವಾಡವನ್ನು ಇಲ್ಲಿ ಕಾಣಬಹುದು.



# ಅಡಿಗರ ಕಾವ್ಯ; ಗ್ರಹಿಕೆಯ ನೆಲೆಗಳು

-ಟಿ.ಯಲ್ಲಪ್ಪ

ಗೋಪಾಲಕೃಷ್ಣ ಅಡಿಗರು ನವ್ಯಕಾವ್ಯ ಪ್ರವರ್ತಕರೆಂದು ಖ್ಯಾತರಾಗಿದ್ದರೂ ನವೋದಯ ಕಾವ್ಯ ಪರಂಪರೆಯ ಮೂಲಕ ತಮ್ಮ ಕಾವ್ಯ ಜೀವನವನ್ನು ಆರಂಭಿಸಿದವರು. ನವೋದಯ ಕಾವ್ಯವನ್ನು ಬರೆದೇ ಇಲ್ಲವೇನೋ ಎನ್ನುವಷ್ಟರ ಮಟ್ಟಿಗಿನ ಅವರ ನವ್ಯಕಾವ್ಯ ರಚನೆಯ ಪ್ರಸಿದ್ಧಿಯ ನಡುವೆಯೇ ಅವರ "ಮೋಹನ ಮುರಲಿ" ಕವನ ನವೋದಯ ಕಾವ್ಯದ ಉತ್ತಮ ಪ್ರತಿನಿಧಿಯಾಗಿದೆ. ಇಂಥ ಧೋರಣೆಯನ್ನು ಪ್ರಭಾವವನ್ನು ತೋರಿಸುವ ಕವನಗಳನ್ನು ಅಡಿಗರ ಕಾವ್ಯದಲ್ಲಿ ಗುರುತಿಸಬಹುದಾಗಿದೆ.

ಆದರೆ ಅಡಿಗರ ಕಾವ್ಯದ ಹೆಗ್ಗಳಿಕೆ ಇರುವುದು ಕೇವಲ ಇದೊಂದು ಅಂಶದಿಂದ ಅಲ್ಲ ಎಂಬುದರಿಂದ. ಪ್ರಾಚೀನ, ಮಧ್ಯಕಾಲೀನ ಹಾಗೂ ತನ್ನ ಸಮಕಾಲೀನ ಕಾವ್ಯ ಪರಂಪರೆಯ ಸತ್ವವನ್ನು ಮೈಗೂಡಿಸಿಕೊಂಡವರು. ನವೋದಯ ಕಾವ್ಯ ಪರಂಪರೆಗೇ ಅಂಟಿಕೊಳ್ಳದವರು. ಪಾಶ್ಚಾತ್ಯ ಸಾಹಿತ್ಯದ ನೆರವನ್ನು ಪಡೆಯುತ್ತಲೇ ತಮ್ಮ ಕಾವ್ಯ ರೀತಿಗೆ ಆಧುನಿಕತೆಯನ್ನುಗಳಿಸಿಕೊಂಡವರು. ತಮ್ಮ ಸಮಕಾಲೀನ ಕನ್ನಡ ಕವಿಗಳಿಗಿಂತ ಅಡಿಗರ ಕಾಳಜಿಗಳು ಭಿನ್ನವಾದುದು ಹಾಗು ವಿಶಿಷ್ಟವಾದುದೂ ಆಗಿವೆ. ಅವರ ದೃಷ್ಟಿ ಮತ್ತು ಸಂವೇದನೆಗಳಲ್ಲಿ ಪರಂಪರೆಯ ಚಿಂತನೆ ಮತ್ತು ವಿಮರ್ಶೆಗಳು ನಿರಂತರವಾಗಿ ಮುಂದುವರೆದುಕೊಂಡು ಬಂದಿರುವುದು ಅಡಿಗರ ಕಾವ್ಯದ ವೈಶಿಷ್ಟ್ಯಗಳಲ್ಲಿ ಒಂದು.

ಹೀಗೆ ಪ್ರಾಚೀನ, ಮಧ್ಯಕಾಲೀನ, ಪಾಶ್ಚಾತ್ಯ ಹಾಗು ಆಧುನಿಕ ಕಾವ್ಯ ಪರಂಪರೆಗಳೆಲ್ಲದರಿಂದ ಪುಷ್ಟಿಗೊಂಡರೂ, ಅಭಿವ್ಯಕ್ತಿಯ ಸಂದರ್ಭದಲ್ಲಿ ಸದಾ ಸ್ವಂತಿಕೆಯನ್ನು ಕಾಪಾಡಿಕೊಂಡು ಬರಲು ಶ್ರಮಿಸಿದವರು. "ಅನ್ಯರೊರೆದುದನೆ ಬರೆದುದನೆ ಬರೆಬರೆದು ಬಿನ್ನಗಾದ ಮನಸ್ಸಿನಿಂದ ತಮ್ಮ ಎದೆಯೊಳಗನೇ ತೆರೆದು ಬಣ್ಣ ಬಣ್ಣದಲ್ಲಿ ಬಣ್ಣಿಸುವ ಪನ್ನತಿಕೆ"ಯನ್ನು ಅಡಿಗರ ಕಾವ್ಯ ಸಾಧಿಸಿದೆ.

ಭಾಷೆಯ ಬಳಕೆ, ಪ್ರತಿಮೆಗಳ ಸಂಕೀರ್ಣತೆ ಹಾಗು ಸುಸಂಬದ್ಧತೆಗಳೊಂದಿಗೆ ಭೂತ ವರ್ತಮಾನಗಳ ತಾಕಲಾಟವನ್ನು ಅವರ ಕಾವ್ಯದಲ್ಲಿ ಗುರುತಿಸಬಹುದಾಗಿದೆ 'ವರ್ಧಮಾನ' 'ಭೂತ' 'ಇಂದುನಮ್ಮೀನಾಡು', 'ಬತ್ತಲಾರದಗಂಗೆ' 'ಪ್ರಾರ್ಥನೆ ', 'ಅಜ್ಜನೆಟ್ಟಾಲ' 'ನೆನಪುಗಳೇ ಹಾಗೆ' ಇಂತಹ ಹಲವಾರು ಕವನಗಳಲ್ಲಿ ಪರಂಪರೆ ಹಾಗು

ವರ್ತಮಾನಗಳ ನಡುವಿನ ಸಂಘರ್ಷ; ಹಳೆ ಹೊಸ ತಲೆಮಾರುಗಳ ನಡುವಿನ ಸಂದಿಗ್ಧತೆಗಳನ್ನು ಕಾಣಬಹುದು. ಪುರಾಣವನ್ನು ವರ್ತಮಾನವನ್ನು ಬೆಸೆದು ನೋಡುತ್ತಾ ವಾಸ್ತವದ ಪರಿಣಾಮವನ್ನು ಕಣ್ಣಿಗೆ ಕಟ್ಟಿಸುವ ಚಿಕಿತ್ಸಕ ದೃಷ್ಟಿಕೋನವನ್ನು ಅಡಿಗರು ಹೊಂದಿದವರಾಗಿದ್ದಾರೆ.

ಸ್ವಾತಂತ್ರ್ಯೋತ್ತರ ಭಾರತದಲ್ಲಿನ ರಾಜಕೀಯ ವ್ಯವಸ್ಥೆಯ ಬಗೆಗೆ ತಮ್ಮಲ್ಲಿ ಹಾಗು ರಾಷ್ಟ್ರದಲ್ಲಿ ಮೂಡಿದ್ದ ಆಸೆ-ಹತಾಸೆಗಳ ನಡುನಡುವೆಯೇ ತಾವು ನಿರೀಕ್ಷಿಸಿದ್ದ ಪ್ರಜಾಪ್ರಭುತ್ವದ ವಿಫಲತೆಯನ್ನು ಅತ್ಯಂತ ಮೊನಚಾದ ವ್ಯಂಗ್ಯ ವಿಡಂಬನೆಗಳ ಮೂಲಕ ಪರಿಣಾಮಕಾರಿಯಾದ ಪ್ರತಿಭಟನೆಯನ್ನು ಮಾಡಿದ್ದಾರೆ. ''ನೆಹರು ನಿವೃತ್ತರಾಗುವುದಿಲ್ಲ'' ಹಾಗು ''ಗಾಂಧೀರಾಜ್ಯ''ದಂತಹ ಕವನಗಳಲ್ಲಿ ನೆಹರೂ ಹಾಗು ಇಂದಿರಾಗಾಂಧಿಯವರ ಪಟ್ಟಭದ್ರ ಹಿತಾಸಕ್ತಿ; ಅಧಿಕಾರದ ಲಾಲಸೆ; ಪ್ರಜಾಪ್ರತಿನಿಧಿಗಳ ಹೆಸರಲ್ಲಿ ಸರ್ವಾಧಿಕಾರವನ್ನು ಮೆರೆದ ಅವರ ಸಾಮ್ರಾಜ್ಯಶಾಹಿ ಗುಣಗಳನ್ನು ಗುರುತಿಸಿ ಪ್ರಕಟಿಸುವ ಎದೆಗಾರಿಕೆಯನ್ನು ಅಡಿಗರು ತಮ್ಮ ಕಾವ್ಯದಲ್ಲಿ ತೋರಿಸಿದ್ದಾರೆ. 'ಎಡಬಲ' 'ಗಜೇಂದ್ರಮೋಕ್ಷ' 'ಬರುತ್ತಾರೆ' 'ರಾಜ್ಯ ಬಂದರೇನು?' ''1958ರ ಪಾಠ'' ಇಂತಹ ಹಲವಾರು ಕವಿತೆಗಳಲ್ಲಿ ಸಮಾಜವಾದಿ, ಕಮ್ಯುನಿಸ್ಟ್ ಹಾಗು ಪ್ರಜಾಪ್ರಭುತ್ವ ರಾಜಕೀಯ ವ್ಯವಸ್ಥೆಗಳೊಳಗಿನ ಲೋಪದೋಷಗಳನ್ನು ಕುರಿತ ಚಿಂತನೆಯನ್ನು ನಡೆಸಿದ್ದಾರೆ.

ಅಡಿಗರ ಕಾವ್ಯವನ್ನು ಕುರಿತ ವಿಮರ್ಶೆಯ ಸಂದರ್ಭದಲ್ಲಿ ಕನ್ನಡದ ಹಲವಾರು ಖ್ಯಾತ ವಿಮರ್ಶಕರು ಈ ಎಲ್ಲಾ ದೃಷ್ಟಿಕೋನಗಳಿಂದ ಅಡಿಗರ ಕಾವ್ಯವನ್ನು ಅರ್ಥೈಸಿ ವ್ಯಾಖ್ಯಾನಿಸಿರುವುದು ಸರಿಯಷ್ಟೆ ಹೀಗೆ ಹಲವಾರು ಆಯಾಮಗಳಿಂದ ಅಡಿಗರ ಕಾವ್ಯಾಧ್ಯಯನ ನಡೆದಿದ್ದರೂ ಅವರ ಕಾವ್ಯದಲ್ಲಿ ಇಷ್ಟೇ ಪ್ರಧಾನವಾದ ಚಿಂತನೆಗಳಾಗಬಹುದಾದ ಸಂಸ್ಕೃತಿ ಹಾಗು ವ್ಯಕ್ತಿತ್ವ ವಿಕಾಸಗಳ ಬಗೆಗೆ ಅಡಿಗರ ಚಿಂತನೆ ಒಂದು ಪ್ರಧಾನವಾದ ಚಿಂತನೆಯೇ ಆಗಿದ್ದು ಆ ಬಗೆಗೆ ಒಂದು ಸಮಗ್ರವಾದ ಅಧ್ಯಯನ ಇನ್ನುನಡೆಯಬೇಕಾಗಿದೆ.

ತಮ್ಮ ಕಾವ್ಯದ ಪ್ರಧಾನವಾದ ಆಶಯಗಳಲ್ಲಿ ವ್ಯಕ್ತಿತ್ವ ವಿಕಾಸವೂ ಪ್ರಮುಖವಾದುದಾಗಿತ್ತು ಎಂಬುದಕ್ಕೆ ಅಡಿಗರೇ ಸಂದರ್ಶನವೊಂದರಲ್ಲಿ ಆಡಿರುವ ಈ ಮುಂದಿನ ಮಾತುಗಳು ಒಳ್ಳೆಯ ನಿದರ್ಶನವಾಗುತ್ತವೆ.

"ನಾನೊಂದು ಹೊಸ ರೀತಿಯಲ್ಲಿ ಬರೆಯುವುದು ಅನಿವಾರ್ಯವಾಗಿ ಒಂದು ಹೊಸ ಮಾರ್ಗವನ್ನು ರಚಿಸಿಕೊಳ್ಳಬೇಕಾಗಿ ಬಂದಿದ್ದರಿಂದ ಅಂಥ ಮಾರ್ಗ ನಿರ್ಮಾಣದಲ್ಲೇ ನನ್ನಶಕ್ತಿಯನ್ನುಕೇಂದ್ರೀಕರಿಸಬೇಕಾಗಿತ್ತು. ಯಾವ ಹೊಸ ಮಾರ್ಗವೇ ಆಗಲಿ ಭದ್ರ ವ್ಯಕ್ತಿತ್ವದ ಬುನಾದಿಯ ಮೇಲೆ ಅಲ್ಲದೆ ಬೇರೆ ನಿರ್ಮಾಣವಾಗಲಾರದು. ಅಂಥ ವ್ಯಕ್ತಿತ್ವದ ಆವಿಷ್ಕಾರದ ಕಡೆಗೇ ನನ್ನ ಲಕ್ಷ ಬಹಳ ಕಾಲ ನೆಟ್ಟಿತ್ತು"

ಅಡಿಗರು ವ್ಯಕ್ತಿಯಾಗಿ ಮೊದಲಿನಿಂದಲೂ ಹೇಗೆ ಕಾವ್ಯದೊಳಗೇನೆ ತಮ್ಮ ವ್ಯಕ್ತಿತ್ವದ ವಿಶಿಷ್ಟತೆಗಾಗಿ, ವಿಕಾಸಕ್ಕಾಗಿ ಹಾತೊರೆದರೋ ಹಾಗೆಯೇ ಸ್ವಾತಂತ್ರ್ಯೋತ್ತರ ಭಾರತದ ಪ್ರಜಾಪ್ರಭುತ್ವದಲ್ಲಿ ಪ್ರಜೆ-ಪ್ರಭುವಾಗಬೇಕೆಂದು ಬಯಸಿದವರು. ಪ್ರಜೆ-ಪ್ರಭುವಾಗದ ಅವಕಾಶ ಇರದ ಹೊರತು ಅವನ ಏಳಿಗೆ ಸಾಧ್ಯವಿಲ್ಲ ಎಂದು ನಂಬಿದ್ದವರು. ವ್ಯಕ್ತಿಸ್ವಾತಂತ್ರ್ಯವಿಲ್ಲದ ಪ್ರಜಾರಾಜ್ಯದಲ್ಲಿ ತೋರಿಸುವ ಸ್ವಾತಂತ್ರ್ಯದ ಆಮಿಷದಿಂದಲೂ ವ್ಯಕ್ತಿಯ ಪ್ರಗತಿ ಸಾಧಿಸಲಾರರು, ರಾಜಕೀಯ ವ್ಯಕ್ತಿಗಳು ವಾಗ್‌ರೂಪದಲ್ಲಿ ಹರಿಸುವ ಹಾಲಿನ ಧಾರೆಯಿಂದಾಗಲಿ; ಭಾಷಣಗಳಿಂದಾಗಲಿ ವ್ಯಕ್ತಿಯಾಗಲಿ, ರಾಷ್ಟ್ರದಲ್ಲಾಗಲಿ ವಿಕಾಸ ಸಾಧ್ಯವಾಗದು. ಈ ದೃಷ್ಟಿಯಿಂದ ರೂಪಿಸಿದ ಯೋಜನೆಗಳೂ ವಿಫಲವೇ ಎಂಬುದನ್ನು ಅವರ ರಾಜಕೀಯ ವಿಡಂಬನೆಯ ಹಲವಾರು ಕವಿತೆಗಳಲ್ಲಿ ಕಾಣಬಹುದು.

ಅಡಿಗರ ಕಾವ್ಯದಲ್ಲಿನ ವ್ಯಕ್ತಿ ಹಾಗು ಸಂಸ್ಕೃತಿಯ ಬಗೆಗಿನ ಈ ಚಿಂತನೆಯನ್ನು ವಿದ್ವಾಂಸರಾದ ಹಲವಾರು ವಿಮರ್ಶಕರು ಅಡಿಗರ ಕಾವ್ಯವನ್ನು ಕುರಿತ ವಿಮರ್ಶೆಯ ಸಂದರ್ಭದಲ್ಲಿ ಪ್ರಾಸಂಗಿಕವಾಗಿಯೋ ಅಥವಾ ವಿಚಾರ ಸಂಕಿರಣವೊಂದಕ್ಕೆ ಲೇಖನ ರೂಪದಲ್ಲಿಯೋ ಚರ್ಚಿಸಿದ್ದಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಇರುವ ಕೆಲವು ಬಿಡಿಗವನಗಳ ಚರ್ಚೆ ನಡೆದಿದೆ. ಸಂಸ್ಕೃತಿ ಮತ್ತು ವ್ಯಕ್ತಿಯ ವಿಕಾಸವನ್ನು ಕುರಿತದ್ದಕ್ಕಿಂತ ಮಿಗಿಲಾಗಿ ಅವುಗಳ ಭಾಷೆ, ಧ್ವನಿ, ಧೋರಣೆ, ಒಟ್ಟಾರೆ ಶಿಲ್ಪದ ದೃಷ್ಟಿಯಿಂದ ಪ್ರಾಯೋಗಿಕ ವಿಮರ್ಶೆಯ ಹಂತದಲ್ಲೇ ನಿಂತು ಬಿಟ್ಟಿರುವುದರಿಂದ ಈ ವಿಷಯವನ್ನು ಕುರಿತಾದ ಅಧ್ಯಯನದ ಕೊರತೆ ಇದೆ.

ಅಡಿಗರು ತಮ್ಮ ಕಾವ್ಯದಲ್ಲಿ ಕಟ್ಟಿ ಬೆಳೆಸಿರುವ ಈ ವ್ಯಕ್ತಿಗಳು ಬಹುಮುಖ್ಯವಾಗಿ ತಮ್ಮ ವ್ಯಕ್ತಿತ್ವದ ಮಗ್ಗುಲುಗಳನ್ನು ಹಿಗ್ಗಲಿಸಿಕೊಂಡು ವಿಕಾಸವಾಗಿದ್ದರೆ ಅಥವಾ ಕುಗ್ಗಿಸಿಕೊಂಡು ಸಂಕುಚಿತವಾಗಿದ್ದರೆ ಅದು ಏಕಾಏಕಿ ವ್ಯಕ್ತಿಯೊಬ್ಬನ ಸ್ವಪ್ರಯತ್ನದಿಂದ ಅಲ್ಲ ಅಥವಾ ಸಮೂಹ, ಸಮಾಜದ ಜೊತೆಗಿನ ಸಂಬಂಧ; ಬಂಧನದಿಂದಲೂ ಅಲ್ಲ. ಏಕ

ಕಾಲಕ್ಕೆ ವ್ಯಕ್ತಿ, ಸಮೂಹ, ಸಮಾಜಗಳೆಲ್ಲವನ್ನೂ ಒಂದು ಏಕಸೂತ್ರ ಸಂಬಂಧದಲ್ಲಿ ಬಂಧಿಸಲೆಳಸುವ ಸಂಸ್ಕೃತಿಯಿಂದಲೇ ಸಾಧ್ಯ. ಆದುದರಿಂದ ವ್ಯಕ್ತಿಯ ಸಂಬಂಧ ಎನ್ನುವುದು ಕುಟುಂಬ, ಸಮೂಹ, ಸಮಾಜಗಳೊಂದಿಗೆ ಅವಿಭಾಜ್ಯವಾದ ಸಂಬಂಧವನ್ನು ಪಡೆದುಕೊಂಡು ಬೆಳೆಯುತ್ತದೆ. ಸಂಸ್ಕೃತಿಯೂ ಹಾಗೆ ವ್ಯಾಪಕವಾದುದು. ಸಂಸ್ಕೃತಿ ವಿಭಿನ್ನ ಪ್ರಭಾವ, ಪರಿಣಾಮಗಳಿಗೆ ಮೈಕೊಟ್ಟೂ ಕೂಡ ತನ್ನ ಅನನ್ಯತೆಯನ್ನು ಉಳಿಸಿಕೊಂಡು ಬರುವಂತಹುದಾಗಿದೆ. ಇದೊಂದು ಕಾಲ ದೇಶಕ್ಕೆ ಕಟ್ಟುಬಿದ್ದಂತೆ ಕಂಡುಬಂದರೂ ವಿವಿಧ ಕಾಲ ದೇಶಗಳಲ್ಲಿ ಬಾಳಿ ಬದುಕಿದ ವಸ್ತು ಜೀವಿಗಳೆಲ್ಲದರ ಜೀವನಕ್ರಮವನ್ನು ರೂಪಿಸಿದಂತಹುದೇ ಆಗಿಬಿಟ್ಟಿದೆ.

ಅಡಿಗರ ಕಾವ್ಯದ ಹಲವಾರು ಸಂದರ್ಭಗಳಲ್ಲಿ ಸಂಸ್ಕೃತಿ ಮತ್ತು ವ್ಯಕ್ತಿತ್ವಗಳ ನಡುವಿನ ತಾಕಲಾಟವನ್ನು ಕಾಣಬಹುದು. ಇದನ್ನು ಪರಂಪರೆ ಮತ್ತು ವ್ಯಕ್ತಿಯ ನಡುವಣ ಘರ್ಷಣೆ ಎಂದೂ ಕರೆಯಬಹುದಾಗಿದೆ. ನಾನಿಲ್ಲಿ ಪರಂಪರೆಯನ್ನೇ 'ಸಂಸ್ಕೃತಿ' ಎಂದು ಕರೆಯುತ್ತಿದ್ದೇನೆ ಎಂದು ಇದರ ಅರ್ಥವಲ್ಲ. ಪರಂಪರೆಯಲ್ಲೊಂದು 'ಸಂಸ್ಕೃತಿ'ಯೂ ಸಂಸ್ಕೃತಿಗೂ ಒಂದು ಪರಂಪರೆಯು ಇರುವುದರ ಹಿನ್ನೆಲೆಯಿಂದ ಇದನ್ನು ಗ್ರಹಿಸಬಹುದಾಗಿದೆ. ಹೀಗೆ ಅಡಿಗರ ಕಾವ್ಯದೊಳಗೆ ಇರುವ ಸಂಸ್ಕೃತಿ ಹಾಗು ವ್ಯಕ್ತಿಯ ನಡುವಣ ಸಂಬಂಧದ ಸ್ವರೂಪ ಎಂತಹುದು ಎಂದು ಗುರುತಿಸುವುದರ ಜೊತೆಗೆ ವ್ಯಕ್ತಿಯೊಬ್ಬನ ವ್ಯಕ್ತಿತ್ವ ಆಯಾ ಸಂಸ್ಕೃತಿಯಿಂದ ಎಷ್ಟರ ಮಟ್ಟಿಗೆ ಪ್ರಭಾವಿತವಾಗಿದೆ ಎಂಬುದನ್ನು ಗುರುತಿಸಿಕೊಳ್ಳುವುದು; ಒಂದು ಪಕ್ಷ ಅವನ ಬೆಳವಣಿಗೆ ಆಗದಿದ್ದಲ್ಲಿ ಅದಕ್ಕೆ ಸಂಸ್ಕೃತಿ ಮತ್ತಿತರ ಕಾರಣಗಳ ಪಾಲೆಷ್ಟು? ಪರಿಪೂರ್ಣತೆ ಸಾಧ್ಯವೆ? ಈ ವಿಕಾಸದ ಕಲ್ಪನೆಯ ಹಿಂದೆ ಇರುವ ಅಡಿಗರ ಆಶಯಗಳೇನು? ಎಂಬುದೆಲ್ಲದರ, ಅಧ್ಯಯನವನ್ನು ಕಾವ್ಯ ವ್ಯಕ್ತಿತ್ವ ಪರಿಸರದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ವ್ಯಕ್ತಿಯ ಬೆಳವಣಿಗೆಗೆ ಸಾಧಕ ಬಾಧಕಗಳಾಗಬಹುದಾದ ಅವನ ಪರಿಸರದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹೀಗೆ ಹಲವು ಹಿನ್ನೆಲೆಗಳಿಂದ ಪ್ರಸ್ತುತ ಅಧ್ಯಯನದ ವ್ಯಾಪಕತೆ ಇರುವುದರಿಂದ ವೈವಿಧ್ಯವೂ ಆಗಬಹುದೆಂದು ಈ ಅಧ್ಯಯನಕ್ಕೆ ಪ್ರಯತ್ನಿಸಿದ್ದೇನೆ.

ಸಂಸ್ಕೃತಿಯ ಸಂದರ್ಭದಲ್ಲೂ ಸಹಾ ಅಡಿಗರು ಎತ್ತುವ ಪ್ರಶ್ನೆಗಳು ತನ್ನ ಸಮಕಾಲೀನ ಹಾಗು ನವ್ಯ ಸಾಹಿತ್ಯಗಳೆರಡರಲ್ಲೂ ವಿಶಿಷ್ಟವಾದುದಾಗಿದೆ. ಸಂಸ್ಕೃತಿಯ ಪರವಾದ ಅವರ ಕಾಳಜಿಗಳು ಎಂತಹವು ಎಂಬುದೂ ಸಹಾ ಗುರುತಿಸಲೇ ಬೇಕಾದ

ಅಂಶವಾಗಿದೆ. ಬ್ರಿಟಿಷ್ ವಸಾಹತುಶಾಹಿ ಹಾಗು ಕೈಗಾರಿಕಾ ಕ್ರಾಂತಿಯ ನಂತರದ ವಿಜ್ಞಾನದ ಪ್ರಗತಿ ಒಡ್ಡಿದ ಹೊಸ ಅರಿವುಗಳಿಂದ ಈ ದೇಶದಲ್ಲಿ ಉಂಟಾದ ಒಂದು ಹೊಸ ಸಂಕೀರ್ಣ ಸಾಂಸ್ಕೃತಿಕ ವಾತಾವರಣ; ಹಾಗೂ ಬ್ರಿಟಿಷರ ನಿರ್ಗಮನ ಪ್ರಮುಖವಾದ ಘಟ್ಟ. ಬ್ರಿಟಿಷರ ನಿರ್ಗಮನದ ನಂತರವೂ ಆ ಸಂಸ್ಕೃತಿಯ ಪ್ರಭಾವದಿಂದ ಬಿಡಿಸಿಕೊಳ್ಳಲಾರದ, ಇತ್ತ ವೈದಿಕ ಸಂಸ್ಕೃತಿಯೊಂದಿಗೆ ಇದನ್ನು ಹೊಂದಿಸಿಕೊಳ್ಳಲೂ ಆಗದ ಸಂದಿಗ್ಧತೆಯನ್ನು ಈ ದೇಶದ ಸಂಸ್ಕೃತಿಯೊಳಗೆ ಒಂದಲ್ಲ ಒಂದು ರೀತಿಯಿಂದ ವ್ಯಕ್ತಿಯಾದವನು ಎದುರಿಸಿದ್ದಾನೆ.

ಇಂದಿಗೂ ಅದನ್ನು ಎದುರಿಸುತ್ತಲೋ, ಸ್ವೀಕರಿಸುತ್ತಲೋ, ಅಥವಾ ತನ್ನ ಸಂಸ್ಕೃತಿಯ ಒಂದಂಗವನ್ನಾಗಿ ಅನ್ಯ ಸಂಸ್ಕೃತಿಯೊಂದನ್ನು ಅಳವಡಿಸಿಕೊಳ್ಳಲಾಗದೆ ಕೊರಗುವ ತಾಕಲಾಟವನ್ನು ಅಡಿಗರ ಕಾವ್ಯ ಗುರುತಿಸುವಲ್ಲಿ ಸಫಲವಾಗಿದೆ.

ನಮ್ಮ ಸಂಸ್ಕೃತಿಯ ಎಡಬಿಡಂಗಿತನವನ್ನು, ಅರ್ಥ ರಹಿತವಾದ ಅನ್ಯ ಸಂಸ್ಕೃತಿಯ ಅನುಕರಣೆಯನ್ನು, ಗೊಡ್ಡು ವ್ಯಾಮೋಹವನ್ನು 'ಇಂದು ನಮ್ಮೀ ನಾಡು' ವಿನಂತಹ ಕವನಗಳು ಗುರುತಿಸಿದರೆ, 'ಬತ್ತಲಾರದ ಗಂಗೆ' ಯಂತಹ ಕವನದಲ್ಲಿ ಹಿಂದೂ ಧರ್ಮ ಸಂಸ್ಕೃತಿಯು ತನ್ನ ಪ್ರಾಚೀನತೆ ಹಾಗು ಪಾವಿತ್ರ್ಯದ ಹೆಸರಲ್ಲಿ ಕೊಳೆತು ಗಬ್ಬುನಾರುವುದರ ವಿಡಂಬನೆಯನ್ನು ಕಾಣಬಹುದಾಗಿದೆ.

(ಕೃಪೆ:- ಕಿ.ರಂ. ನಾಗರಾಜರ ಮಾರ್ಗದರ್ಶನದಲ್ಲಿ ಬೆಂಗಳೂರು ವಿವಿಗೆ ಸಲ್ಲಿಸಿದ ಎಂ.ಫಿಲ್ ಪ್ರಬಂಧದ ಒಂದು ಅಧ್ಯಾಯದಿಂದ.)



"ಅಡಿಗರ ನುಡಿಯಲ್ಲಿ ಕೆಚ್ಚಿದೆ, ಲಾಲಿತ್ಯವಿದೆ, ವಿಧಿಗೆ ಎದುರಾಗುವ ಅಪರಿಮಿತ ಉತ್ಸಾಹವಿದೆ"

**- ಬೇಂದ್ರೆ.**

ಕವನ

# ಅಡಿಗವನಗಳು

-ಎಚ್.ಡುಂಡಿರಾಜ್

-1-

ಅಡಿಗರೆ
ನವ್ಯಕಾವ್ಯದ
ಗಾರುಡಿಗರೆ
ನಿಮ್ಮ ಪ್ರತಿಯೊಂದು ಕೃತಿಯೂ
ಕಾವ್ಯ ಸರಸ್ವತಿಗೆ
ಅಮೂಲ್ಯ ಉಡುಗೊರೆ
ಅಡಿಗರೆ
ನಿಮ್ಮ ಕಾವ್ಯದ
ಪ್ರತಿ ಪದಕ್ಕೂ
ಎಳೆಯಬೇಕು
ಅಡಿಗೆರೆ !

-2-

ಸಂಪ್ರದಾಯ ಶರಣರು
ಕ್ರಾಂತಿಕಾರಿ ಎಂದು ದೂರಿದರು
ಅಡಿಗರನ್ನು
ಬಂಡಾಯದವರು
ಪ್ರತಿಗಾಮಿ ಎಂದು ಸಾರಿದರು
ಅಡಿಗರನ್ನು
ದಲಿತರು ಪುರೋಹಿತಶಾಹಿ
ಎಂದು ಕರೆದರು
ಅಡಿಗರನ್ನು
ಕಮ್ಯುನಿಷ್ಟರು ಜನಸಂಘ
ಎಂದು ಜರೆದರು
ಅಡಿಗರನ್ನು

ನಗುನಗುತ್ತ ಎದುರಿಸಿ
ಎಲ್ಲ ಬಗೆಯ ದಾಳಿಯನ್ನು
ಬಾರಿಸುತ್ತಲೆ ಹೋದರು
ಅಡಿಗ-ರನ್ನು !
ರನ್ನುಗಳ ಮೇಲೆ ರನ್ನು
ಕಾವ್ಯಲೋಕದ ಬ್ರಾಡ್‌ಮೆನ್ನು.

-3-

ಅಡಿಗರ ಚಂಡೆ ಮದ್ದಳೆ
ಕಿವಿ ಹೊಕ್ಕಿದ್ದರೆ
ಮೋಹನ ಮುರಳಿ
ಕೇಳಲು ಸಿಕ್ಕಿದ್ದರೆ
ಅಥವಾ ಅವರೇ ಒಮ್ಮೆ
ಏನಯ್ಯ ಎಂದು
ಕಣ್ಣು ಹೊಡೆದು ನಕ್ಕಿದರೆ
ತಪ್ಪಾಯ್ತು ಎಂದು ಬಹುಶಃ
ಬಿಟ್ಟು ಹೋಗುತ್ತಿದ್ದ
ಕಾಲ ಪುರುಷ !

(ಪ್ರ: ತುಷಾರ, ಏಪ್ರಿಲ್'93)

# ಅಡಿಗರ 'ವರ್ಧಮಾನ'ದ ಕುರಿತು

**-ಬಾಲಸುಬ್ರಹ್ಮಣ್ಯ ಕಂಜರ್ಪಣೆ**

ಅಡಿಗರ 'ವರ್ಧಮಾನ' ಅತ್ಯಂತ ಸಮಕಾಲೀನವಾದ ವಾದ ವಿವಾದಗಳಲ್ಲಿ ತಲೆಮಾರುಗಳ ನಡುವೆ ನಡೆಯುತ್ತಿರುವ, ನಡೆಯಲೇಬೇಕಾದ ಸಂಘರ್ಷ, ಮುಖಾಮುಖಿ, ಅರ್ಥವಾಗದಿರುವಿಕೆ ಇವನ್ನು ಆಧುನಿಕ ಮತ್ತು ಪೌರಾಣಿಕ ಪ್ರತಿಮೆಗಳ ಜೋಡಾಟದ ಮೂಲಕ ಚಿತ್ರಿಸಿದೆ. ಪಿ.ಲಂಕೇಶ್ ಗುರುತಿಸಿದಂತೆ "ಅಡಿಗರಿಗೂ ಹೊಸ ಜನಾಂಗಕ್ಕೂ ಸೇತುವೆ ಇಲ್ಲಿದೆ; ಅಡಿಗರು ಹೇಗೆ ಸರಳ, ಸೆಂಟಿಮೆಂಟಲ್ ಸಂಬಂಧಗಳನ್ನು ನಿರ್ಲಕ್ಷಿಸಿ ಆಳದ ಸಜೀವ ಬಳ್ಳಿಗಳನ್ನು ಹುಡುಕುತ್ತಾರೋ ಹಾಗೆಯೇ ಹೊಸ ಜನಾಂಗ ತನಗಾದದ್ದನ್ನು ತೀವ್ರವಾಗಿ ಅನುಭವಿಸಿ, ತನ್ನತನ, ಕನ್ನಡದ ಗುಣ ಕಂಡುಕೊಳ್ಳುತ್ತಿದೆ." ...."ಭೂತ-ವರ್ತಮಾನ, ತಂದೆ-ಮಗ, ಕವಿ-ಹೊಸತನ ಇವುಗಳಿಗೆ ಹೊಸ ನಿಲುವು, ಈ ನಿಲುವಿಗೆ ಸ್ಪಷ್ಟೀಕರಣ ಇಲ್ಲಿದೆ:" ..."ಅಡಿಗರು ಕೇವಲ ಉರಿತ, ವೈಫಲ್ಯ, ವಿಕಾರದ ಬಗ್ಗೆ ಹೇಳದೆ ಸೃಷ್ಟಿಕಾರ್ಯದ ಬಗ್ಗೆ ಸಿನಿಕತನ, ಉದ್ಧಟತನದಂತೆ ಕಾಣುವ ಎಳೆಯರ ಕ್ರಿಯಾಶಕ್ತಿಯ ಬಗ್ಗೆ ಹೇಳುತ್ತಿದ್ದಾರೆ." ಈ ಕವನ ಅಡಿಗರ ಅತ್ಯುತ್ತಮ ಸೃಷ್ಟಿಗಳಲ್ಲೊಂದು. ಹೆಸರೇ ಸೂಚಿಸುವಂತೆ ಕವನವು ವರ್ಧಮಾನ ಸ್ಥಿತಿಯ ವಿಷಣ್ಣತೆಯನ್ನು ವ್ಯಂಗ್ಯದಿಂದ ಮತ್ತು ವಿಷಾದದಿಂದ ನೋಡುತ್ತದೆ. ಕವನ ಆರಂಭವಾಗುವುದೇ ಬೆಳೆದುನಿಂತ ಯುವಕನ ಚಿತ್ರದೊಂದಿಗೆ. ತನಗೆ ತಾನೇ ರಾಜಕುಮಾರನಾದ ಈತನಿಗೆ ಮೀಸೆ ಬಂದಾಗ ದೇಶ ಕಾಣದು. ಈವರೆಗಿದ್ದ ನಿಯಂತ್ರಣ ಇನ್ನಿಲ್ಲ. ಕೊಂಬು ಮೊಳೆವ ಹೋರಿಯ ಪ್ರತಿಮೆಯನ್ನು ಯುವಕನಿಗೆ ಆವಾಹಿಸಿದಾಗ ಮೊಳೆವ ತುರಿಕೆಯನ್ನು ತೀರಿಸಲು ಹಾಯುವುದು ಅನಿವಾರ್ಯ. ಎಲ್ಲಾದಕ್ಕೂ ಸಿಟ್ಟು; ಸಹಜ-ಅಸಹಜಗಳ ಭಿನ್ನತೆ ಅರಿಯದೆ ಅರಬ್ಬಿ ಠಾಕಣ ಸವಾರಿಯ ಪೊಗರು.

**....................ಆಕಾಶ ಕೈಗೆಟುಕದಿದ್ದಕ್ಕೆ,**

**ಕೋಶಾವಸ್ಥೆ ಮರಳಿ ಬಾರದ್ದಕ್ಕೆ, ತನಗಿಂತ ಮೊದಲೇ ತನ್ನಪ್ಪ ಹುಟ್ಟಿದ್ದಕ್ಕೆ**

**ಮೊಲೆ ಬಿಡಿಸಿದವಮಾನ ಮುಯ್ಯಿ ತೀರದ್ದಕ್ಕೆ ರೊಚ್ಚು;**

ಇವೆಲ್ಲವೂ ಪ್ರಕೃತಿಸಹಜವಾದರೂ ಆತ ರೇಗಿ ಕಿರುಚುತ್ತಾನೆ. ಯಕ್ಷಗಾನದ ಪುಂಡು ವೇಷಗಳಿಗೆ ಸಹಜವಾದ ಬಲಪ್ರದರ್ಶನ ಆತನದ್ದು. "ಹೂಂಕರಿಸಿ ಹಾರುತ್ತಾನೆ ಮೂರು ಗುಪ್ಪು."

ಎರಡನೇ ಭಾಗದಲ್ಲಿ ಈ ಕಿಲಾಡಿತನಕ್ಕೆ ಉತ್ತರದಂತೆ ಅವನು ನಡೆಯುವ ಹಾದಿಗೂ ಕಿಲಾಡಿತನ. ನಿಯಮಗಳನ್ನು ಉಲ್ಲಂಘಿಸದಯೇ ಅಪಘಾತಗಳಾಗುವ ಈ ತಲೆಮಾರಿನಲ್ಲಿ ನಿಯಮೋಲ್ಲಂಘನೆಯಾದಾಗ ಅಘಘಾತವಾಗದೇ ಉಳಿದೀತೆ? ವರ್ಧಮಾನ ಮೈ ಕೈ ತರಚಿಕೊಂಡಿದ್ದಾನೆ. ಅರಬ್ಬಿ ಠಾಕಣದ ಹಾಗೆ ಗಾಳಿಗುದುರೆ ಸವಾರಿಗೆ ಉಬ್ಬಿಸಿದ ಹಿಪ್ಪಿ ಗೆಳೆಯರು ಗೆಲ್ಲೇರಿ ತಮ್ಮ ಕಪಿಬುದ್ಧಿಯನ್ನು ಪ್ರದರ್ಶಿಸುತ್ತಿದ್ದಾರೆ. ಹೀಗೆ ಬಿದ್ದುಹೋದ ವರ್ಧಮಾನರೆಷ್ಟೋ? ಈ ಗಾಯಗೊಂಡವನ ಪಾಡಿಗೆ ಅನುಕಂಪಿಸುವವರೇ ಇಲ್ಲ. ಇದನ್ನು ಅಭಿನಯವೆಂದು ಕಂಡು ನಲಿದವರೂ ಇಲ್ಲ. ಅವಮಾನಿತನಿಗೆ ಕಾಡ ಮೂಲಕವೇ ಪಥ ಆಗಸಕ್ಕೆ. ಅಪರಿಮಿತ ತಾಕತ್ತಿನ ವರ್ಧಮಾನನಿಗೆ ತನ್ನ ಉದ್ದೇಶವೇನೆಂದೇ ಗೊತ್ತಿಲ್ಲ. ಮರೆತಿದ್ದಾನೆ. ಹೇಗೋ ಮುನ್ನುಗ್ಗಿದ್ದರೆ ಸರಿ; ಇಲ್ಲವಾದರೆ ತನ್ನ ಶಕ್ತಿಯ ಅರಿವಿಲ್ಲದವರಂತೆ; ತನಗೇ ತಾನೇ ಬೇಡಿ ಹಾಕಿಕೊಂಡಂತೆ.

ಮೂರನೆಯ ಭಾಗದಲ್ಲಿ ತಂದೆ ಇದನ್ನೆಲ್ಲ ನೋಡಿ ಯೋಚಿಸುತ್ತಿದ್ದಾನೆ. ಮಗ ಕೊರಕಲಿನಲ್ಲಿದ್ದರೆ ತಂದೆ ದಂಡೆಯ ಮೇಲೆ. ಮಗ ಅಳಲುತ್ತಾನೆ. ತಂದೆ "ಕೂಗಿ ಕೂಗಿ" ಕರೆದರೂ ಅವನಿಗೆ ಕೇಳಿಸದು. ಯಾಕೆ ಹೀಗೆ? ತಂದೆ ಅರ್ಥವಾಗದೇ "ನನ್ನ ಪ್ರತಿರೂಪ ಹುಡಿಗೊಳ್ಳುವೀ ಕಸಿವಿಸಿಗೆ ಕಂಗಲಾದೆ" ಎನ್ನುತ್ತಾನೆ. ಪರಂಪರೆಯನ್ನು ಶ್ರದ್ಧೆಯಿಂದ ಉಳಿಸಿ ಬೆಳೆಸದಿದ್ದರೆ ಪಿತೃಪಿತಾಮಹರು ತರ್ಪಣವಿಲ್ಲದೆ ಅನಾಥರಾಗುತ್ತಾರೆ. ಈಗ ಬೇರೆಯಾಗುವುದಕ್ಕೆ ಅವಕಾಶ ಕೊಡಬಾರದಿತ್ತೋ ಏನೋ? ಆದರೆ ಆತನಿಗೆ ತನ್ನ ಮೂಲದ ಚಿಂತೆಯಿಲ್ಲ. ಎಲ್ಲಾದರೂ ಬಿದ್ದು ಸ್ವತಂತ್ರವಾಗಿ ಬದುಕುವ ಆಸೆ. ಇಂತಹ ಸ್ವೇಚ್ಛಾಚಾರಕ್ಕೆ ಮಿತಿ ಯಾವುದು?

ನಾಲ್ಕನೆಯ ಹಾಗೂ ಕೊನೆಯ ಭಾಗದಲ್ಲಿ ಅತೀವ ವಿಶ್ವಾಸ ಬರುವ ಕೆಲಸವನ್ನೇ ಮಗ ಮಾಡುತ್ತಿದ್ದಾನೆಂದು ತಂದೆಗೆ ತಿಳಿಯುತ್ತದೆ.

**ಬಿದ್ದೆದ್ದು ಹರೆವ, ಹರಿಯುವ ಜಾಡು**

**ಹಿಡಿವ, ಗುರುತಿಸುವ, ಬೇರೆ ಬಗೆವ, ಕಳೆದದ್ದನ್ನು ಪಡೆವ**

**ಪಡೆದದ್ದಕ್ಕೆ ಪಡಿ ಹತ್ತು ಹಡೆವ ಕಕುವದ ಕರಡು**

**ಸಿದ್ಧಪಡಿಸುವ ಕವ್ಯ ವರ್ಧಮಾನಗೆ**

ಆತ ಒದ್ದಾಡುತ್ತಿದ್ದಾನೆ; ಆದರೂ ತನ್ನಷ್ಟಕ್ಕೆ ತಾನು ಬೆಳೆಯುತ್ತಿದ್ದಾನೆ; ಬೆಳಗುತ್ತಿದ್ದಾನೆ. ಅದಕ್ಕೆ ದಾರಿಯಿದೆ. ''ಗಹ್ವರದ ಒಳಗತ್ತಲಲ್ಲಿ ಸುತ್ತಲು ತಡಕಿ ತಡೆದು ನಡೆಯುವ....'' ವರ್ಧಮಾನ ಈ ಗಹ್ವರದ ಇನ್ನೊಂದು ಮುಖವನ್ನು ತಲುಪಿದ್ದಾನೆ. ಅದು ಭವ್ಯ ಭವಿಷ್ಯದ ಹಾದಿ.

**ಗಹ್ವರದ ಮುಖ ಅಲ್ಲಿ' ಆಚೆ ಬಯಲ ಬರಾವು;**

**ಹಣ್ಣು ಹಂಪಲು ಹಸುರ ಬಲ್ಲೆ, ಬಲ್ಲೆ;**

**ಜೀವನ ನಿಧಾನಶ್ರುತಿ ಶುದ್ಧಿ ಮೊರೆವ ಕರಾವು;**

**ಹನುಮದ್ವಿಕಾಸಕ್ಕೆ ಇಲ್ಲ ಎಲ್ಲೆ.**

ಎಂಬ ಆಶಾದಾಯಕ ತೃಪ್ತಿಯೊಂದಿಗೆ ಕವನ ಮುಗಿಯುತ್ತದೆ. ಹನುಮನ ಪ್ರತಿಮೆಯೊಂದಿಗೆ ವರ್ಧಮಾನದ ಬೆಳವಣಿಗೆಗೆ ಎಲ್ಲೆ ಇಲ್ಲ ಎಂಬುದನ್ನು ಹೇಳುವುದರೊಂದಿಗೆ ವಿಕಾಸಕ್ಕೆ ಅಡ್ಡಿಯಾಗುವ ಯಾವ ಎಲ್ಲೆಯೂ ಈ ಜಗತ್ತಿನಲ್ಲಿಲ್ಲ ಎಂಬ ಧ್ವನಿಯೂ ಇದೆ. ಬಿಗಿಬಂಧದ ಈ ಕವನ ಎಲ್ಲೂ ಶೈಥಿಲ್ಯಕ್ಕೆ ಎಡೆಕೊಡುವುದಿಲ್ಲ.

(ನವ ಕರ್ನಾಟಕ ಪ್ರಕಾಶನದವರು ಇತ್ತೀಚೆಗೆ ಪ್ರಕಟಿಸಿದ ಬಾಲಸುಬ್ರಹ್ಮಣ್ಯ ಕಂಜರ್ಪಣೆ ಅವರ 'ಗೋಪಾಲ ಕೃಷ್ಣ ಅಡಿಗ' ಎಂಬ ಪುಸ್ತಕದಿಂದ ಆಯ್ದ ಭಾಗ - ಸಂ.)



# 'ರಾಷ್ಟ್ರ ಕವಿ' ಜಿ.ಎಸ್.ಎಸ್

- ಬಿ.ವಿ. ಕೆದಿಲಾಯ

ಸುವರ್ಣ ಕರ್ನಾಟಕ ಆಚರಣೆಯ ಸಂದರ್ಭದಲ್ಲಿ ಕನ್ನಡದ ಖ್ಯಾತ ಕವಿ, ವಿಮರ್ಶಕ, ಪ್ರಾಧ್ಯಾಪಕ ಡಾ.ಜಿ.ಎಸ್.ಶಿವರುದ್ರಪ್ಪನವರು 'ರಾಷ್ಟ್ರ ಕವಿ' ಪ್ರಶಸ್ತಿಗೆ ಆಯ್ಕೆಯಾಗಿದ್ದಾರೆ. ಕನ್ನಡ ಸಾಹಿತ್ಯ ಪ್ರೇಮಿಗಳೆಲ್ಲರಿಗೂ ಇದು ಸಂತೋಷ ನೀಡುವ ಸುದ್ದಿ. ಹಿಂದೆ ಆ ಪ್ರಶಸ್ತಿ ಮಂಜೇಶ್ವರ ಗೋವಿಂದ ಪೈಯವರಿಗೂ, ಮಹಾಕವಿ ಕುವೆಂಪು ಅವರಿಗೂ ಸಂದಿತ್ತು. ಇಂದು ನಮ್ಮ ನಡುವೆ ಇರುವ ಕವಿಗಳಲ್ಲಿ ಜಿ.ಎಸ್.ಎಸ್. ಅತ್ಯಂತ ಹಿರಿಯರೂ, ಅರ್ಹರೂ ಆಗಿದ್ದಾರೆ. ಎನ್ನುವುದರಲ್ಲಿ ಸಂದೇಹವಿಲ್ಲ.



ಜಿ.ಎಸ್.ಎಸ್. ಅವರು ಕುವೆಂಪುರವರ ಮೆಚ್ಚಿನ ಶಿಷ್ಯರಾಗಿ, ಅವರ ಪ್ರಭಾವದಲ್ಲೇ ಬೆಳೆದವರಾದರೂ, ಬಹುಬೇಗ ತಮ್ಮ ಸ್ವಂತಿಕೆಯನ್ನು ಬೆಳೆಸಿಕೊಂಡು, ಪದ್ಯ, ಗದ್ಯ, ಅಧ್ಯಾಪನ ಕ್ಷೇತ್ರಗಳಲ್ಲಿ ಅಸಾಧಾರಣವಾದ ಸಾಧನೆಯನ್ನು ಮಾಡಿ ಹೊಸ ತಲೆಮಾರಿನ ಕವಿ-ಸಾಹಿತಿಗಳಿಗೆ ಗುರು ಸ್ಥಾನದಲ್ಲಿರುವವರು. ಅವರು ಸುಮಾರು 500ಕ್ಕೂ ಹೆಚ್ಚು ಕವನಗಳನ್ನು ಬರೆದಿದ್ದಾರೆ. 'ಎದೆ ತುಂಬಿ ಹಾಡುವೆನು' 'ದೀಪ ಹಚ್ಚುತ್ತೇನೆ' 'ಪ್ರೀತಿ ಇಲ್ಲದ ಮೇಲೆ' ಮುಂತಾದ ಜನಪ್ರಿಯ ಭಾವಗೀತೆಗಳಲ್ಲದೆ 'ಮಬ್ಬಿನಿಂದ ಮಬ್ಬಿಗೆ' ಅಂತಹ ಅದ್ಭುತ ನವ್ಯ ಕವನಗಳನ್ನು ಬರೆದಿದ್ದಾರೆ. ನವೋದಯ, ನವ್ಯ, ನವ್ಯೋತ್ತರ - ಹೀಗೇ ಮೂರು ಸಂಪ್ರದಾಯಗಳಿಗೆ ಸೇರಿದ ಹಾಗೂ ಯಾವ ವರ್ಗೀಕರಣಕ್ಕೂ ಸೇರದ ಅನೇಕ ಅತ್ಯುತ್ತಮ ಕವನಗಳನ್ನು ಅವರ ಸಮಗ್ರ ಕಾವ್ಯದಲ್ಲಿ ಕಾಣುತ್ತೇವೆ.

ಜಿ.ಎಸ್.ಎಸ್. ನಮ್ಮ ಅತ್ಯುತ್ತಮ ಗದ್ಯ ಲೇಖಕರಲ್ಲೊಬ್ಬರು. ಸುಮಾರು 18 ಕೃತಿಗಳಲ್ಲಿ ಹರಡಿರುವ ಅವರ ಬರಹಗಳಲ್ಲಿ ಆಳವಾದ ಪಾಂಡಿತ್ಯ, ವಿಸ್ತಾರವಾದ ಓದು, ವಿವೇಚನೆ, ವಿಶ್ಲೇಷಣೆ, ವಿಮರ್ಶೆಯ ವಿವೇಕ ಅತ್ಯಂತ ನಿಖರವಾದ, ವಾಚನೀಯವಾದ ಶೈಲಿಯಲ್ಲಿ ವ್ಯಕ್ತವಾಗಿವೆ. ಸಂಸ್ಕೃತ, ಇಂಗ್ಲಿಷ್ ಭಾಷೆಗಳನ್ನು ಕನ್ನಡದಷ್ಟೇ ಶ್ರದ್ಧೆಯಿಂದ ಅಧ್ಯಯನ ಮಾಡಿರುವ ಜಿ.ಎಸ್.ಎಸ್. ಕನ್ನಡ ವಿಮರ್ಶೆಗೆ ನೀಡಿದ ಕೊಡುಗೆ

ಮಹತ್ವದ್ದು. ಅವರ 'ಕಾವ್ಯಾರ್ಥ ಚಿಂತನ' 'ಸೌಂದರ್ಯ ಸಮೀಕ್ಷೆ' 'ವಿಮರ್ಶೆಯ ಪೂರ್ವ ಪಶ್ಚಿಮ' ಮುಂತಾದ ಪುಸ್ತಕಗಳ ಸತ್ವ ಸೊಗಸುಗಳನ್ನು ಓದಿಯೇ ಸವಿಯ ಬೇಕು. 'ವಿಮರ್ಶೆಯ ಪೂರ್ವ ಪಶ್ಚಿಮ'ದಂತಹ ವಿಮರ್ಶಾ ಗ್ರಂಥ ಹತ್ತು ಸಲ ಪುನರ್ಮುದ್ರಣ ಗೊಂಡಿರುವುದು ಇದಕ್ಕೆ ಸಾಕ್ಷಿ. ಅದನ್ನು ಒಂದು ದಾಖಲೆ ಎಂದರೂ ಸರಿಯೇ. ಇನ್ನು ಜಿ.ಎಸ್.ಎಸ್. ಅವರ ಪ್ರವಾಸ ಕಥನಗಳಂತೂ ಆ ಪ್ರಕಾರದಲ್ಲೇ ಅನನ್ಯವೆನಿಸುವ ರಸಘಟ್ಟಿಗಳು. ಮತ್ತೆ ಮತ್ತೆ ಓದಲು ಪ್ರೇರಿಸುವಂಥ ಸ್ವಾರಸ್ಯಕರ ಕೃತಿಗಳು.

ಕನ್ನಡ ಪ್ರಾಧ್ಯಾಪಕರಾಗಿ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ 'ಕನ್ನಡವನ್ನು ಕಟ್ಟುವ ಕೆಲಸ' ಮಾಡುವುದರಲ್ಲೂ ಜಿ.ಎಸ್.ಎಸ್ ಅವರ ಸಾಧನೆ ಅವಿಸ್ಮರಣೀಯವಾದುದು. ಅವರ ಅಧಿಕಾರಾವಧಿಯಲ್ಲಿ ನಡೆದ ಉನ್ನತ ಮಟ್ಟದ ವಿಚಾರ ಗೋಷ್ಠಿಗಳು, ವಿಶಿಷ್ಟ ಪ್ರಕಟಣೆಗಳು, ವಿದ್ಯಾರ್ಥಿಗಳಲ್ಲೂ ಸಾಹಿತ್ಯ ಪ್ರಿಯರಲ್ಲೂ ಕನ್ನಡದ ಅಭಿಮಾನ, ಬದ್ಧತೆ, ನಿಷ್ಠೆಗಳನ್ನು ಪ್ರೇರಿಸುವುದರಲ್ಲೂ ಅವರು ನೀಡಿದ ಕೊಡುಗೆ ಅಸಾಧಾರಣ. ನಿಷ್ಠೆ ಅಪಾರವಾಗಿದ್ದರೂ, ಅವರು ನಿಷ್ಠುರತೆ ಇಲ್ಲದೆ ಕನ್ನಡದ ಕೆಲಸಗಳನ್ನು ಯಶಸ್ವಿಯಾಗಿ ಮಾಡುತ್ತ ಬಂದಿದ್ದಾರೆ. ಎಂಬತ್ತರ ಹರೆಯದಲ್ಲೂ ಕ್ರಿಯಾಶೀಲರಾಗಿ ಕಿರಿಯ ತಲೆಮಾರಿಗೆ ದಾರಿದೀಪವಾಗಿದ್ದಾರೆ. ಸಾಹಿತ್ಯ ಸಮ್ಮೇಳನಾಧ್ಯಕ್ಷತೆಯೂ ಸೇರಿದಂತೆ, ಹಲವಾರು ಸನ್ಮಾನಗಳನ್ನೂ, ಪ್ರಶಸ್ತಿಗಳನ್ನೂ ಪಡೆದಿರುವ ಜಿ.ಎಸ್.ಎಸ್. ಅವರಿಗೆ ದೊರೆತ ಈ ಹೊಸ ಗೌರವ, ಅವರ ಕೃತಿಗಳನ್ನು ಓದಲು ಕನ್ನಡಿಗರಿಗೆ ಪ್ರೇರಣೆಯಾಗಲಿ.

''ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ
ಹಾಡುವುದು ಅನಿವಾರ್ಯ ಕರ್ಮ ನನಗೆ.''

ಎಂದು ತಮ್ಮ ಕಾವ್ಯಧರ್ಮವನ್ನು ಹೇಳಿದ, ನಮ್ಮೆಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾಗಿರುವ 'ರಾಷ್ಟ್ರಕವಿ' ಶಿವರುದ್ರಪ್ಪನವರಿಗೆ ಹಾರ್ದಿಕ ಅಭಿನಂದನೆಗಳು.



ಕವನ

# ಜಿ.ಎಸ್.ಎಸ್. ಎಂದರೆ

- ಶ್ರೀಮತಿ ಪ್ರೇಮಾಭಟ್

ಜಿ.ಎಸ್.ಎಸ್. ಎಂದರೆ
'ಶಿಸ್ತಿನ ಸಿಪಾಯಿ
ಮಾತೋ ಮೌನದೊಳದಿಂದ
ಇಣುಕುವ ತುಣುಕುಗಳು
ಅವು ಆಚೀಚೆ ಹೋಗದಂತೆ
ಕಟ್ಟೆಚ್ಚರವಹಿಸುವ ಈತ
ಕನ್ನಡದ ಕುಲಾಚಾರ್ಯ

ಜಿ.ಎಸ್.ಎಸ್. ಎಂದರೆ
ಮಾತು ಮೌನ
ಲೆಕ್ಕತಪ್ಪದ ಲೇಖ
ಲೋಕದಚ್ಚರಿಯ ಪ್ರತೀಕ

ಜಿ.ಎಸ್.ಎಸ್. ಎಂದರೆ
ಗತ್ತನ್ನು ಗುತ್ತಿಗೆ ಪಡೆದವರು
ಹಾಗೆ ಕಾಣಿಸುವವರು
ಕಾಣಿಸುವಂತಹವರು
ಒಳಗೊಂದು ನಿಮಿಷ
ಅಂತಃಕರಣ
ಇಲ್ಲದೆ ಹೋಗಿದ್ದರೆ
ಪ್ರೀತಿಯಿಲ್ಲದ
ಮೇಲೆ......ಕಾವ್ಯ
ಹುಟ್ಟುತ್ತಿರಲಿಲ್ಲ.

ಜಿ.ಎಸ್.ಎಸ್. ಅವರಿಗೆ
ಈಗ ಎಂಭತ್ತರ ಪ್ರಾಯ
ನಂಬಬಹುದೇ ಇದನ್ನು
ನಂಬಬೇಕಿಲ್ಲ
ಹುಟ್ಟು ಹಾಕುವ ನಾವಿಕನಿಗೆ
ಎಲ್ಲಿಯ ವಯಸ್ಸು
ಬಿತ್ತುವ ಗುರಿಕಾರನಿಗೆ
ವಯಸ್ಸು ಕಾಣುವುದಿಲ್ಲ

ಹೀಗೆ ಇವರು ಬಿತ್ತುತ್ತಿರಲಿ
ಬೀಜವನು
ಕನ್ನಡದ ಕಂಪನ್ನು
ಸೊಂಪಾಗಿಸುತ್ತ
ಇರಲಿ ನಮ್ಮೊಡನೆ
ನಳನಳಿಸುತ್ತಾ
ನೂರ್ಕಾಲ॥

ಸಣ್ಣ ಕತೆ

# ಶನಿ ಹಿಡಿದವ

**- ಕು.ಗೋ.**

ಅವನ ಹೆಸರು ಸೋಮಾ ಸುಗುಣಗಡ. ಕಾರವಾರದ ಸೆಂಟ್ರಲ್ ಎಕ್ಸೈಜ್ ಆಫೀಸಿನಲ್ಲಿ ಸಿಪಾಯಿಯಾಗಿದ್ದ. ತಿಂಗಳಿಗೆ ಅರವತ್ತು ರೂಪಾಯಿ ಸಂಬಳ. ಪ್ರಾಯ ಇಪ್ಪತ್ತೆಂಟು ವರ್ಷ.....ಹತ್ತೊಂಭತ್ತು ವರ್ಷದ ಹೆಂಡತಿ ಆರು ತಿಂಗಳ ಮಗು, ಐವತ್ತೆಂಟು ವರ್ಷದ ತಂದೆ, ಮೂವತ್ತು ವರ್ಷದ ಅಕ್ಕ ಇವರೇ ಅವನ ಹತ್ತಿರದ ಬಂಧುಗಳು. ತಾಯಿ ಕ್ಷಯರೋಗಕ್ಕೆ ತುತ್ತಾಗಿ ಇಹವನ್ನು ತ್ಯಜಿಸಿ ಮೂರು ವರ್ಷವಾಗಿತ್ತು. ಐದು ಅಡಿ ಆರೂವರೆ ಇಂಚು ಉದ್ದ. ನೂರಇಪ್ಪತ್ತೊಂದು ಪೌಂಡು ತೂಕ, ಎದೆಯ ಅಳತೆ ಮೂವತ್ತು ಇಂಚು, ಹೊಟ್ಟೆಯ ಸುತ್ತಳತೆ ಇಪ್ಪತ್ತೇಳು ಇಂಚು - ಇವೆಲ್ಲಾ ಸುಮಾರು ಇಪ್ಪತ್ತೆಂಟು ವರ್ಷಗಳ ಹಿಂದೆ ಇದ್ದಂಥಾ ಸ್ಥಿತಿ.... ಲೈಫ್ ಇನ್‌ಷೂರೆನ್ಸ್ ಕಂಪೆನಿಯ ಏಜಂಟ ಬಾಬೂ ಸಾಹೇಬನ ಒತ್ತಾಯಕ್ಕೆ ಮಣಿದು ಪ್ರಪೋಸಲ್ ಫಾರಂಗೆ ಸಹಿ ಮಾಡುವಾಗ ಸೋಮಾ ಸುಗುಣಗಡನ ವೈಯಕ್ತಿಕ ಹಾಗೂ ಸಾಂಸಾರಿಕ ಪರಿಸ್ಥಿತಿ ಮೇಲ್ಕಂಡಂತೆ ಇತ್ತು ಎಂದು ಪಾಲಿಸಿ ಫೈಲಿನಲ್ಲಿದ್ದ ಹಳೆಯ ಪ್ರಪೋಸಲ್ ಹಾಗೂ ಮೆಡಿಕಲ್ ರಿಪೋರ್ಟ್ ಹೇಳುತ್ತಿತ್ತು.

ಫೈಲಿನಲ್ಲಿದ್ದ ಒಂದೊಂದೇ ಕಾಗದವನ್ನು ಮಗುಚಿ ನೋಡಿದೆ. ಪ್ರೀಮಿಯಂಗಳನ್ನು ಕಾಲಕ್ಕೆ ಸರಿಯಾಗಿ ಕಟ್ಟುತ್ತಿರಲಿಲ್ಲವೆಂದು ಫೈಲಿನಲ್ಲಿದ್ದ ಕಾಗದದ ನಕಲುಗಳೇ ಹೇಳುತ್ತಿದ್ದವು. ಆತ ಒಂದೇ ಕಡೆ ಇರದೆ ಹೊನ್ನಾವರ, ಕುಮಟ, ಕಾಸರಕೋಡು ಇತ್ಯಾದಿ ಸ್ಥಳಗಳಿಗೆ ಹೋಗಿ ಸ್ವಲ್ಪ ಸ್ವಲ್ಪ ಸಮಯವಿದ್ದುದರಿಂದ ಅಲ್ಲಿಂದಲೇ ಪ್ರೀಮಿಯಂ ಪಾವತಿ ಮಾಡುತ್ತಿದ್ದನೆಂದು ತಿಳಿದು ಬಂತು. ಒಂದು ಸಾವಿರ ರೂಪಾಯಿಯ ಪಾಲಿಸಿಗೆ ಇಪ್ಪತ್ತು ವರ್ಷ ಹಣ ಕಟ್ಟಬೇಕಾದಲ್ಲಿ ಒಂಭತ್ತು ವರ್ಷದ ಪ್ರೀಮಿಯಂ ಕಂತುಗಳನ್ನು ಬಹಳ ಕಷ್ಟಪಟ್ಟು ಪಾವತಿ ಮಾಡಿಕೊಂಡು ಬಂದಿದ್ದ. ಅನಂತರ ಸುದ್ದಿಯಿಲ್ಲ. ಆಫೀಸಿನಿಂದ ಹೋದ ಎರಡು ಮೂರು ಕಾಗದಗಳು 'ಅಡ್ರೆಸ್ ಗೊತ್ತಿಲ್ಲ' ಎಂದು ಹಿಂದಿರುಗಿ ಬಂದು ಫೈಲನ್ನು ಸೇರಿದ್ದವು. ನಂತರ ಬಂದ ಪತ್ರ ಹೀಗಿತ್ತು - 'ಸ್ವಾಮೀ ನಾನು 1940ರಲ್ಲಿ ಒಂದು ಸಾವಿರ ರೂಪಾಯಿಗೆ ಇನ್ಶ್ಯೂರೆನ್ಸ್ ಮಾಡಿಸಿದ್ದೆ. ಒಂಬತ್ತು ವರ್ಷವೋ ಹತ್ತು ವರ್ಷವೋ ಹಣ ಕಟ್ಟಿ ನಂತರ ನಾನಾ ತಾಪತ್ರಯಗಳಿಂದ

ಹಣ ಕಟ್ಟಲಾಗಲಿಲ್ಲ. ನನ್ನ ಪಾಲಿಸಿಯ ಮೇಲೆ ಎಷ್ಟು ಹಣ ದೊರಕುತ್ತದೋ ಅಷ್ಟನ್ನೂ ತತ್‌ಕ್ಷಣ ಮನಿಯಾರ್ಡರ್ ಮಾಡಿ. ನಾನು ಈಗ ತುಂಬ ತಾಪತ್ರಯದಲ್ಲಿದ್ದೇನೆ. ಬರುವ ಹಣ ಸಾಲುವುದಿಲ್ಲ. ಹೆಂಡತಿ ಮತ್ತು ನಾಲ್ಕು ಮಕ್ಕಳನ್ನು ಸಾಕಬೇಕು. ಖಾವಂದರರು ದಯವಿಟ್ಟು ನನಗೆ ಆದಷ್ಟು ಬೇಗ ಸಾಲ ಸಿಗುವಂತೆ ಮಾಡಬೇಕು.'

ಪತ್ರವನ್ನು ಕನ್ನಡದಲ್ಲಿ ಬರೆದಿತ್ತಾದರೂ ಸಹಿ ಮರಾಠಿಯಲ್ಲಿತ್ತು. ಆಗ ಸೋಮಾ ಸುಗುಣಗಡನ ವಿಳಾಸ – ಸೆಂಟ್ರಲ್ ಎಕ್ಸೈಜ್ ಸಿಪಾಯಿ, ಕ್ಯಾಸಲ್ ರಾಕ್, ಉತ್ತರಕನ್ನಡ,'

'ಮುನ್ನೂರು ರೂಪಾಯಿ ಸಾಲ ಕೊಡಬಹುದು – ಈ ಹಣದಲ್ಲಿ ಎರಡು ವರ್ಷದ ಪ್ರೀಮಿಯಂ ಹಣವನ್ನು ಬಡ್ಡಿ ಸಮೇತ ವಜಾ ಮಾಡಿ ಉಳಿದ ಹಣವನ್ನು ಕೊಡಬಹುದು. ಈ ಸಾಲ ಬೇಕಿದ್ದಲ್ಲಿ ನಿಮ್ಮಲ್ಲಿರುವ ಪಾಲಿಸಿ ಬಾಂಡನ್ನೂ ಲೋನ್ ಬಾಂಡ್‌ಗಾಗಿ ಮೂರೂ ಮುಕ್ಕಾಲು ರೂಪಾಯಿಗಳನ್ನು ಕಳುಹಿಸಿ ಎಂದು ಬರೆದಿದ್ದ ಆಫೀಸಿನ ಪತ್ರಕ್ಕೆ ಮೂರು ತಿಂಗಳು ಉತ್ತರವಿಲ್ಲ; ನಂತರ ಬಂದ ಪತ್ರದಲ್ಲಿ ಪಾಲಿಸಿ ಕಳೆದು ಹೋಗಿದೆಯೆಂದೂ ಪಾಲಿಸಿಯನ್ನು ಪೇಡ್ ಅಪ್ ಮಾಡಿ ಮುನ್ನೂರು ರೂಪಾಯಿ ಸಾಲವನ್ನು ಕೂಡಲೇ ಕಳುಹಿಸಬೇಕೆಂದೂ ಬರೆದಿತ್ತು. ಪಾಲಿಸಿಯಲ್ಲದೆ ಸಾಲವಿಲ್ಲ. ಡುಪ್ಲಿಕೇಟ್ ಪಾಲಿಸಿ ಪಡೆಯಲು ಕಳೆದುಹೋದ ಪಾಲಿಸಿಯ ಬಗ್ಗೆ ಪೇಪರಿನಲ್ಲಿ ಜಾಹೀರಾತು, ಜಾಮೀನು ಪತ್ರ ಇತ್ಯಾದಿ ತಾಪತ್ರಯಗಳ ಬಗ್ಗೆ ಪತ್ರ ಬರೆಯಲಾಗಿತ್ತು. 'ನಿಮ್ಮ ಪಾಲಿಸಿಯನ್ನು ಐನೂರ ಐವತ್ತು ರೂಪಾಯಿಗಳಿಗೆ ಪೇಡ್‌ಅಪ್ ಅಂತ ಮಾಡಲಾಗಿದೆ. ಈ ಹಣದಲ್ಲಿ ಎರಡು ವರ್ಷದ ಪ್ರೀಮಿಯಂ ಅನ್ನು ಬಡ್ಡಿ ಸಮೇತ ವಜಾ ಮಾಡಲಾಗುವುದು. ಹಣ ನಿಮ್ಮ ಕೈ ಸೇರುವವರೆಗೆ ಬಡ್ಡಿಯ ಅಂಶ ಹೆಚ್ಚಾಗಬಹುದಾದ್ದರಿಂದ ಈ ಎರಡು ವರ್ಷದ ಪ್ರೀಮಿಯಂ ಹಣವನ್ನು ಆದಷ್ಟು ಬೇಗನೆ ಪಾವತಿ ಮಾಡುವುದು ಒಳ್ಳೆಯದು.' ಈ ರೀತಿ ಬರೆಯಲಾದ ಪತ್ರ 'ವಿಳಾಸದಾರರು ಊರಲಿಲ್ಲ' ಎಂಬ ಕಾರಣದಿಂದ ಹಿಂದಿರುಗಿ ಬಂದು ಫೈಲನ್ನೇ ಸೇರಿತ್ತು.

1960ನೇ ಇಸವಿ ಅಕ್ಟೋಬರ್ ತಿಂಗಳಲ್ಲಿ ಬರೆದಿದ್ದ ಪತ್ರ ಫೈಲಿನಲ್ಲೇ ಇತ್ತು. 'ನಿಮ್ಮ ಪಾಲಿಸಿ ಡಿಸೆಂಬರ್ ಇಪ್ಪತ್ತಕ್ಕೆ ಮೆಚ್ಯೂರ್ ಆಗುತ್ತದೆ. ಪಾಲಿಸಿಯ ಹಣವನ್ನು ಕೊಡುವ ಮುನ್ನ ಪಾಲಿಸಿ ಕರಾರಿನ ಪ್ರಕಾರ ನಿಮ್ಮ ವಯಸ್ಸಿನ ರುಜುವಾತಿಗಾಗಿ ಏನನ್ನೂ ಕಳುಹಿಸದೇ ಇರುವುದರಿಂದ ಕೂಡಲೇ ನಿಮ್ಮ ಜಾತಕವನ್ನಾಗಲೀ, ಶಾಲಾ ಸರ್ಟಿಫಿಕೇಟನ್ನಾಗಲೀ ಕಳುಹಿಸಿ ಕೊಡಿ. ನಂತರ ನಿಮಗೆ ಸೂಕ್ತ ಸಲಹೆ ನೀಡುತ್ತೇವೆ' ಎಂದು ಬರೆದಿತ್ತು. 'ಈ

ಹೆಸರಿನವರು ಈ ಊರಿನಲ್ಲಿ ಯಾರೂ ಇಲ್ಲ' ಎಂಬ ಪೋಸ್ಟ್ ಆಫೀಸಿನವರ ಷರಾದೊಂದಿಗೆ ಪತ್ರ ವಾಪಸ್ಸು ಬಂದಿತ್ತು.

ನಂತರದ ಪತ್ರವ್ಯವಹಾರವನ್ನು ಕುತೂಹಲದಿಂದ ವೀಕ್ಷಿಸಿದೆ.

ಐವತ್ತಾರನೇ ಇಸವಿಯಿಂದ ಜೀವವಿಮಾ ನಿಗಮದ ವಶಕ್ಕೆ.... ಲೈಫ್ ಇನ್ಶೂರೆನ್ಸ್ ಕಂಪೆನಿಯ ಪಾಲಿಸಿಗಳು ಬಂದಿದ್ದುವು.

ಪಾಲಿಸಿ ಮೆಚ್ಯೂರ್ (Mature) ಆಗಿದ್ದರೂ ಹಣ ಪಾವತಿ ಮಾಡಲು ವಿಮಾದಾರನ ಸರಿಯಾದ ವಿಳಾಸವಿಲ್ಲ. ಬ್ರಾಂಚ್ ಆಫೀಸಿಗೆ ಒಂದು ಪತ್ರ ಬರೆದು ವಿಮಾದಾರನ ಪತ್ತೆ ಮಾಡಲು ಕೇಳಿಕೊಳ್ಳಲಾಗಿತ್ತು. ಅವರಿಂದ ಸುಕ್ತಂಠಣಕರ್ ಎಂಬ ಫೀಲ್ಡ್ ಆಫೀಸ್‌ರರಿಗೆ ಒಂದಲ್ಲ ಎರಡಲ್ಲ ಮೂರು ಪತ್ರಗಳನ್ನು ಒಂದು ತಿಂಗಳ ಅವಧಿಯಲ್ಲಿ ಬರೆಯಲಾಗಿತ್ತು. ಆ ಸುಕ್ತಂಠಣಕರ್ ಈ ರೀತಿ ಬರೆದಿದ್ದರು – 'ಈ ಊರಿನಲ್ಲಿ ಈಗ ಸೆಂಟ್ರಲ್ ಎಕ್ಸೈಜ್ ಆಫೀಸು ಇಲ್ಲ. ಆದ್ದರಿಂದ ಬೆಳಗಾವಿಯಲ್ಲಿರುವ ಸೆಂಟ್ರಲ್ ಎಕ್ಸೈಜ್ ಆಫೀಸಿಗೆ ಪತ್ರ ಬರೆಯಿರಿ. ಅವರಿಂದ ಪೂರ್ಣ ಮಾಹಿತಿ ತಿಳಿಯಬಹುದು.'

ಬೆಳಗಾವಿಗೆ ಎರಡು ಮೂರು ಪತ್ರ ಬರೆದರೂ ಜವಾಬಿಲ್ಲ. ನಂತರ ಬೆಳಗಾವಿಯ ಬ್ರಾಂಚ್ ಮ್ಯಾನೇಜರರ ಮುಖಾಂತರ ಬಂದ ಸೆಂಟ್ರಲ್ ಎಕ್ಸೈಜ್ ಆಫೀಸಿನ ಉತ್ತರ ಹೀಗಿತ್ತು – 'ಸೋಮಾ ಸುಗುಣಗಡ ಎಂಬ ಹೆಸರಿನ ಸಿಪಾಯಿ ನಮ್ಮಲ್ಲಿರಲಿಲ್ಲ. ನಮ್ಮ ರಿಕಾರ್ಡನ್ನು ಶೋಧಿಸಲಾಗಿ ದಾಮಾ ಸುಗುಣಗಡ ಎಂಬ ಸಿಪಾಯಿ 1959ರಲ್ಲಿ ಕೆಲಸ ಬಿಟ್ಟು ಹೋಗಿದ್ದಾನೆಂದು ತಿಳಿದು ಬರುತ್ತದೆ. ಅವನ ಆಗಿನ ವಿಳಾಸ ಸುಲ್ತಾನಪುರ.'

ಆ ಪತ್ರದ ಮೇಲೆ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ವಿಮಾದಾರನ ವಿಳಾಸವನ್ನು ಕಂಡು ಹಿಡಿಯುವುದು ಇನ್ನು ಸಾಧ್ಯವಿಲ್ಲವೆಂದು ಆ ಪತ್ರವನ್ನು ಫೈಲ್ ಮಾಡಲಾಗಿತ್ತು. ಆದರೆ 1961ನೇ ಡಿಸೆಂಬರ್ ತಿಂಗಳಲ್ಲಿ ಸೋಮಾ ಸುಗುಡಗಡನ ಪತ್ರವೊಂದು ಬಂದಿತ್ತು. ಆ ಪತ್ರದ ಮೇಲೆ ಬೊಂಬಾಯಿ, ಸತಾರ, ಬೆಂಗಳೂರು ಮೊದಲಾದ ಊರುಗಳ ಠಸ್ಸೆ ಇತ್ತು, ಪತ್ರ ಓದಿದೆ.

'ಸ್ವಾಮೀ ನನ್ನ ಪಾಲಿಸಿಯ ವಾಯಿದೆ ಮುಗಿದು ಒಂದು ವರ್ಷವಾದರೂ ಅದರ ಬಾಬ್ತು ನನಗೆ ಈವರೆಗೂ ಹಣ ಬರಲಿಲ್ಲ. ನಿಮ್ಮಿಂದ ಈ ವಿಷಯವಾಗಿ ಯಾವ

ಕಾಗದ ಪತ್ರಗಳೂ ಬರಲಿಲ್ಲ. ನನಗೆ ಸಲ್ಲಬೇಕಾದ ಹಣವನ್ನು ತತ್‌ಕ್ಷಣ ಮನಿಯಾರ್ಡರ್ ಮುಖಾಂತರ ಕಳುಹಿಸಿ. ನಾನು ಖಾಯಿಲೆಯಲ್ಲಿ ಇದ್ದೇನೆ. ಬಡವನ ಮೇಲೆ ದಯೆಯಿಟ್ಟು ಇನ್ನೂರೆನ್ನಿನ ಹಣವನ್ನು ಬೇಗನೇ ಕಳುಹಿಸಿಕೊಡಿ' ಎಂದು ಬರೆದಿದ್ದ. ಹೊಟ್ಟೆ ಚುರ ಎಂದಿತು. ಅದರಲ್ಲಿದ್ದ ವಿಳಾಸ ನೋಡಿದೆ. 'ಸೋಮಾ ಸುಗುಣಗಡ - ಕೇರಾಫ್ ಎಂ.ಮಡಗಾವ್‌ಕರ್, ಮಾಧವನಗರ - ಸಾಂಗ್ಲಿ' ಎಂದಿತ್ತು. ಅವನ ಪೈಕಿಯವರ ಮನೆಯಲ್ಲಿ ಉಳಿದುಕೊಂಡಿರಬಹುದೆಂದು ಊಹಿಸಿದೆ.

'ನಿಮ್ಮ ಪಾಲಿಸಿಯ ವಾಯಿದೆ 1960ನೇ ಇಸವಿಯಲ್ಲಿ ಮುಗಿದಿದೆಯಾದರೂ ನಾವು ಈ ವಿಷಯವಾಗಿ ಬರೆದ ಪತ್ರಗಳು ನಿಮ್ಮ ವಿಳಾಸ ಸರಿಯಿರದ ಪ್ರಯುಕ್ತ ನಮಗೇ ವಾಪಸ್ಸು ಬಂದುವು. ಈಗ ಪಾಲಿಸಿ ಬಾಂಡು ಹಾಗೂ ನಿಮ್ಮ ಸರ್ಟಿಫಿಕೇಟನ್ನಾಗಲೀ ಈ ಕೂಡಲೇ ಕಳುಹಿಸಿಕೊಟ್ಟಲ್ಲಿ ಮುಂದಿನ ಕ್ರಮವನ್ನು ಕೈಗೊಳ್ಳುತ್ತೇವೆ' - ಎಂದು ಪತ್ರ ಬರೆಯಲಾಗಿತ್ತು.

ಸೋಮಾ ಸುಗುಣಗಡ ಖಾಯಿಲೆಯಲ್ಲಿ ನರಳುತ್ತಿದ್ದಾನೆ. ಕೆಲಸವನ್ನು ಬಿಟ್ಟು ಬೇರೆಯವರ ಆಶ್ರಯದಲ್ಲಿದ್ದಾನೆ. ಒಟ್ಟಿನಲ್ಲಿ ತುಂಬ ತಾಪತ್ರಯದಲ್ಲಿದ್ದಾನೆ - ದೇಶದ ಬಹುಪಾಲು ಜನರಂತೆ. ಸ್ಥಳದಿಂದ ಎದ್ದು ಹೊರಗೆ ಹೋಗಿ ಬಂದೆ. ಕ್ಯಾಂಟೀನಿನ ಗಣಪತಿ ಕೊಟ್ಟ ಕಾಫಿಯನ್ನು ಯಾಂತ್ರಿಕವಾಗಿ ಕುಡಿದು ಗ್ಲಾಸು ಬರಿದು ಮಾಡಿದೆ. ಪಕ್ಕದಲ್ಲೇ ಕುಳಿತಿದ್ದ ಅಮ್ಮಾಜಮ್ಮ ಪಿಳಿ ಪಿಳಿ ನೋಡಿದರು. ಫೈಲನ್ನು ಕೈಗೆತ್ತಿಕೊಂಡೆ.

ಕ್ಯಾಸಲ್‌ರಾಕ್‌ನಲ್ಲಿರುವಾಗ ತನ್ನ ಮನೆಗೆ ಬೆಂಕಿ ಬಿದ್ದು ಎಲ್ಲ ನಾಶವಾಗಿ ಹೋಯಿತೆಂದೂ ಇತರ ಸಾಮಾನುಗಳೊಂದಿಗಿದ್ದ ತನ್ನ ಪಾಲಿಸಿ ಹಾಗೂ ಶಾಲಾ ಸರ್ಟಿಫಿಕೇಟ್‌ಗಳೂ ಬೆಂಕಿಗೆ ಆಹುತಿಯಾದುವೆಂದೂ ತಾನು ಈಗ ನಿರ್ಗತಿಕನಾಗಿ ಅನಾರೋಗ್ಯದಿಂದ ನರಳುತ್ತಾ ಪರರ ಆಶ್ರಯದಲ್ಲಿರುವುದಾಗಿಯೂ ಹೆಂಡತಿ, ಮಕ್ಕಳು ತನಗಾಗಿ ದುಡಿಯುತ್ತಿರುವುದಾಗಿಯೂ ಬಹಳ ಕಳಕಳಿಯಿಂದ ಆತ ಪತ್ರ ಬರೆದಿದ್ದ. ಪಾಲಿಸಿ ಮೆಚ್ಯೂರ್ ಆಗಿ ಆಗಲೇ ಒಂದು ವರ್ಷ ಕಳೆದಿದ್ದುದರಿಂದ ವಯಸ್ಸನ್ನು ದಾಖಲು ಮಾಡದೆ ಕ್ಲೈಮ್‌ಸೆಟ್ಲ್ ಮಾಡಹುದೆಂದು ನಿರ್ಣಯಿಸಲಾಗಿತ್ತು. ಪಾಲಿಸಿ ಬಾಂಡ್ ಇಲ್ಲದಿದ್ದುದರಿಂದ ಒಬ್ಬನನ್ನು ಜಾಮೀನಾಗಿ ತೆಗೆದುಕೊಂಡು ಇಂಡೆಮ್ನಿಟಿ ಬಾಂಡನ್ನು ಬರೆದುಕೊಡಬೇಕೆಂದು ಕೇಳಿಕೊಳ್ಳಲಾಗಿತ್ತು. ಯಾವ ಜವಾಬೂ ಬಾರದಿದ್ದುದರಿಂದ ಒಂದು ತಿಂಗಳ ನಂತರ ಮತ್ತೊಂದು ಪತ್ರವನ್ನು ಬರೆಯಲಾಗಿತ್ತು. ಅದಕ್ಕೆ ಬಂದ ಉತ್ತರ

ಸ್ವಲ್ಪ ದೀರ್ಘವೇ ಆಗಿತ್ತು. ಇಂಗ್ಲೀಷಿನಲ್ಲಿ ಪತ್ರವನ್ನು ಯಾರಿಂದಲೋ ಬರೆಯಿಸಿ ಸುಗುಣಗಡ ಮರಾಠಿಯಲ್ಲಿ ಸಹಿ ಹಾಕಿದ್ದ.

ಪತ್ರದ ಸಾರಾಂಶ ಇಷ್ಟೆ – 'ನೀವು ಕಳುಹಿಸಿದ ಡಿಸ್ಚಾರ್ಜ್ ರಶೀತಿ ಹಾಗೂ ಇಂಡೆಮ್ನಿಟಿ ಬಾಂಡಿನ ಡ್ರಾಫ್ಟ್ ಸಿಕ್ಕಿತು. ಡಿಸ್ಚಾರ್ಜ್ ರಶೀತಿಯಲ್ಲಿ ನನಗೆ ಸಲ್ಲಬೇಕಾದ ಹಣ ಕೇವಲ ಮುನ್ನೂರ ಏಳೂವರೆ ರೂಪಾಯಿ ಎಂದು ನಮೂದಿಸಲಾಗಿದೆ. ಇದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಯಿತು. ನಾನು ಕಟ್ಟಿದ ಹಣವೇ ಐನೂರು ರೂಪಾಯಿಗಳವರೆಗೆ ಆಗಿದೆ. ಈ ಹಣಕ್ಕೆ ಬಡ್ಡಿಯೂ ಇಲ್ಲ, ಬೋನಸ್ಸೂ ಇಲ್ಲ. ನಾನು ಕಟ್ಟಿದ ಹಣ ಕೂಡಾ ನನಗೆ ಈಗ ಸಿಗುತ್ತಿಲ್ಲ. ಇಷ್ಟು ಅನ್ಯಾಯವಾಗಲು ಕಾರಣವೇನು? ನನ್ನ ಲೆಕ್ಕ ಪತ್ರವನ್ನು ಸರಿಯಾಗಿ ಪರಿಶೀಲಿಸಿ ನನಗೆ ಸೇರಬೇಕಾದ ಹಣವನ್ನು ಬಡ್ಡಿ ಬೋನಸ್ಸು ಇತ್ಯಾದಿಗಳನ್ನೂ ಸೇರಿಸಿ ಕಳುಹಿಸಿಕೊಡುವ ಕೃಪೆ ಮಾಡಿ. ನಾನು ಇನ್ನೂ ಜೀವಂತವಾಗಿ ಇದ್ದೇನೆ, ಜೀವಂತವಾಗಿರುವಾಗಲೇ ನನ್ನ ಹಣ ಕೊಡುತ್ತೀರಾ? ಹದಿನೈದು ದಿವಸದೊಳಗೆ ನನಗೆ ಜವಾಬು ಬಾರದಿದ್ದಲ್ಲಿ ನಾನು ನಿಮ್ಮ ಮೇಲಿನ ಆಫೀಸರರಿಗೆ ದೂರು ಕೊಡುತ್ತೇನೆ. ಅಲ್ಲಿಯೂ ನ್ಯಾಯ ದೊರಕದಿದ್ದರೆ ಮುಂದೆ ಕೋರ್ಟಿಗೆ ಹೋಗಿ ನನ್ನ ಹಣ ಪಡೆಯಲು ಪ್ರಯತ್ನಿಸುತ್ತೇನೆ, ತಿಳಿಯಿರಿ.'

ನಾನು ಅಲ್ಲೇ ಲೆಕ್ಕ ಹಾಕಿದೆ. ಆತ ಪ್ರೀಮಿಯಂ ಮುಖಾಂತರ ಕೊಟ್ಟ ಹಣ – ನಾಲ್ಕುನೂರ ಎಪ್ಪತ್ತ ಏಳು ರೂಪಾಯಿ. ನಮ್ಮ ಲೆಕ್ಕದ ಪ್ರಕಾರ ಆತನಿಗೆ ಕೊಡಬೇಕಾದ ಹಣ ಮುನ್ನೂರ ಏಳು ರೂಪಾಯಿ ಐವತ್ತು ಪೈಸೆ. ಹೆಚ್ಚು ಕಡಿಮೆ ನೂರ ಎಪ್ಪತ್ತು ರೂಪಾಯಿ ನಷ್ಟ. ಬಡವನ ಹೊಟ್ಟೆಗೆ ಪೆಟ್ಟು! ಆದರೇನು ಮಾಡುವುದು? ಕಾನೂನು ಪ್ರಕಾರ, ಪಾಲಿಸಿ ಕರಾರಿನ ಪ್ರಕಾರ ಆತನಿಗೆ ಸಿಗಬೇಕಾದ ಹಣ ಅಷ್ಟೇ!

ಅದಕ್ಕೆ ಬರೆದಿದ್ದ ಉತ್ತರ ನಕಲನ್ನು ನೋಡಿದೆ. ಪತ್ರದ ಬುಡದಲ್ಲಿ ಅಮ್ಮಾಜಮ್ಮನ ಸಣ್ಣ ಸಹಿ ಇತ್ತು. ಅವರೇ ಅದನ್ನು ಬರೆದಿರಬೇಕು.

'ನಿಮ್ಮ ಪತ್ರದ ಸಾರಾಂಶ ತಿಳಿಯಿತು. ನೀವು ಈಗ ನಿಮಗೆ ಸಲ್ಲಬೇಕಾದ ಹಣಕ್ಕಿಂತಲೂ ಹೆಚ್ಚಿಗೆ ಹಣವನ್ನು ಪ್ರೀಮಿಯಂ ರೂಪದಲ್ಲಿ ಪಾವತಿ ಮಾಡಿದ್ದೀರೆಂಬ ಅಂಶವನ್ನು ನಾವು ಒಪ್ಪುತ್ತೇವೆ. ಆದರೆ ವಿಮಾ ವ್ಯವಹಾರದಲ್ಲಿ ಕಟ್ಟಿದ ಹಣವೇ ಅವಧಿ ಮುಗಿದ ನಂತರ ಸಿಗುತ್ತದೆ ಎಂಬ ನಿಮ್ಮ ಭಾವನೆ ತಪ್ಪು. ವಿಮಾ ಕಂಪೆನಿಯವರು ಒಂದು

ನಿಗದಿಯಾದ ಮೊಬಲಗನ್ನು ನಿಗದಿಯಾದ ಸಮಯದೊಳಗೆ ಮರಣ ಸಂಭವಿಸಿದಲ್ಲಿ ಅಥವಾ ನಿಗದಿಯಾದ ಸಮಯದ ಅಂತ್ಯದಲ್ಲಿ ವಿಮಾದಾರನು ಬದುಕಿ ಉಳಿದರೆ ಕೊಡುವುದಾಗಿ ಭರವಸೆ ನೀಡುತ್ತಾರೆ. ಅಂದರೆ ವಿಮಾದಾರನು ಒಂದೇ ಕಂತು ಪ್ರೀಮಿಯಂ ಕಟ್ಟಿ ಸತ್ತರೂ ಆತ ಎಷ್ಟು ಹಣಕ್ಕೆ ವಿಮೆ ಮಾಡಿರುತ್ತಾನೋ ಅಷ್ಟು ಹಣವನ್ನು ಕೊಡಬೇಕಾಗುತ್ತದೆ. ಲಕ್ಷಾಂತರ ಜನರು ಕೊಡುವ ಪ್ರೀಮಿಯಂ ಹಣದ ಸ್ವಲ್ಪ ಭಾಗವನ್ನು ತೆಗೆದಿರಿಸಿ ಒಂದು ನಿಧಿಯನ್ನು ಮಾಡಿ ಆ ನಿಧಿಯಿಂದ ಹೀಗೆ ಅವಧಿ ಮುಗಿಯುವುದರೊಳಗೆ ಸಾಯುವ ವಿಮಾದಾರರ ವಾರಸುದಾರರಿಗೆ ಹಣವನ್ನು ಕೊಡುವ ಏರ್ಪಾಡು ಮಾಡಲಾಗಿರುತ್ತದೆ. ಈ ದೃಷ್ಟಿಯಿಂದ ಪಾಲಿಸಿಯ ಪೂರ್ಣ ಅವಧಿಯಲ್ಲಿ ಕೊಡಬೇಕಾದ ಪ್ರೀಮಿಯಂ ವಿಮಾ ಮೊಬಲಗಿಗಿಂತ ತುಸು ಜಾಸ್ತಿಯಾದರೂ ಕೂಡ ಈ ನಷ್ಟದ ಅಂಶವನ್ನು ಬೋನಸ್ ಮುಖಾಂತರ ಭರ್ತಿ ಮಾಡಲಾಗುತ್ತದೆ. ಹೆಚ್ಚಿನ ಜನರಿಗೆ ಪಾಲಿಸಿಯ ಪೂರ್ಣಾವಧಿ ಮುಗಿದ ನಂತರ ಸಿಗುವ ಹಣವು ಪಾಲಿಸಿ ಮೊಬಲಗಿಗಿಂತ ಎಷ್ಟೋ ಹೆಚ್ಚಾಗಿರುತ್ತದೆ. ಎಂಬ ವಿಷಯವು ನಿಮಗೆ ತಿಳಿದಿರಬಹುದು. ಆದರೆ ದುರದೃಷ್ಟವಶಾತ್ ನಿಮ್ಮ ಪಾಲಿಸಿಯ ಹಣದಲ್ಲಿ ಸ್ವಲ್ಪವನ್ನು ಈ ಕೆಳಗೆ ವಿವರಿಸಿರುವ ಕಾರಣಗಳಿಂದ ಖೋತಾ ಮಾಡಬೇಕಾಯಿತು.

"…….ಲೈಫ್ ಇನ್ಶೂರೆನ್ಸ್ ಕಂಪೆನಿಯು ವಿಮಾ ವ್ಯವಹಾರದಲ್ಲಿ ತುಂಬ ನಷ್ಟ ಹೊಂದಿದ್ದುದರಿಂದ ಬೊಂಬಾಯಿ ಹೈಕೋರ್ಟಿನವರು ಒಂದು ಆಜ್ಞೆಯನ್ನು ಹೊರಡಿಸಿ ಪಾಲಿಸಿಯ ಹಣವನ್ನು ಶೇಕಡಾ 15 ರಷ್ಟು ಕಡಿಮೆ ಮಾಡಿಕೊಡುವಂತೆ ಮಾಡಿದರು. ಆ ಪ್ರಕಾರ ನಿಮಗೆ ಸಲ್ಲಬೇಕಾದ ಹಣದಲ್ಲಿ ಶೇಕಡಾ 15 ರಷ್ಟನ್ನು ಕಡಿಮೆ ಮಾಡಿದ್ದೇವೆ. ಅದರಲ್ಲದೆ ಎರಡು ಪ್ರೀಮಿಯಂ ಅನ್ನು ಕಂಪೆನಿಯೇ ನಿಮ್ಮ ಪಾಲಿಸಿಯ ಹಣಕ್ಕೆ ಅಡ್ವಾನ್ಸ್ ಮಾಡಿದ್ದುದರಿಂದ ಆ ಹಣವನ್ನು ಬಡ್ಡಿ ಸಮೇತ ವಜಾ ಮಾಡಬೇಕಾಗಿದೆ. ಅಲ್ಲದೆ ಈ ಪಾಲಿಸಿ ಬೋನಸ್ಸಿಗೆ ಅರ್ಹವಾಗಿಲ್ಲ. ಈ ಕಾರಣಗಳಿಂದ ನಿಮಗೆ ಸಲ್ಲಬೇಕಾದ ಹಣ ಕೇವಲ ಮುನ್ನೂರ ಏಳು ರೂಪಾಯಿ ಐವತ್ತು ಪೈಸೆ ಎಂದು ದೃಢಪಡಿಸುತ್ತೇವೆ. ಡಿಸ್ಚಾರ್ಜ್ ರಶೀದಿ ಹಾಗೂ ಪಾಲಿಸಿ ಬಾಂಡು ಅಥವಾ ಇಂಡೆಮ್ನಿಟಿ ಬಾಂಡ್ ಕಳುಹಿಸಿಕೊಟ್ಟಲ್ಲಿ ಮೇಲೆ ನಮೂದಿಸಿದ ಹಣವನ್ನು ನಿಮಗೆ ಚೆಕ್ ಮುಖಾಂತರ ಕಳುಹಿಸುತ್ತೇವೆ. ಬ್ಯಾಂಕ್ ಡ್ರಾಫ್ಟ್ ಅಥವಾ ಮನಿಯಾರ್ಡರ್ ಮುಖಾಂತರ ಕಳುಹಿಸಬೇಕಾದಲ್ಲಿ ಅದಕ್ಕೆ ತಗಲಬಹುದಾದ ಕಮಿಷನನ್ನು ಮುರಿಯಲಾಗುವುದು – ವಿಶ್ವಾಸವಿರಲಿ."

ಈ ಪತ್ರ ಕಳುಹಿಸಿದ ಮೇಲೆ ಸುಮಾರು ಒಂದೂವರೆ ತಿಂಗಳ ನಂತರ ಮತ್ತೊಂದು ಪತ್ರವನ್ನು ಬರೆಯಲಾಗಿತ್ತು. ಅಲ್ಲದೆ ಸಾಂಗ್ಲಿ ಬ್ರಾಂಚ್ ಮೆನೇಜರರಿಗೊಂದು ಪತ್ರ ಬರೆದು ವಿಮಾದಾರರನ್ನು ಭೇಟಿಯಾಗಿ ಕ್ಲೈಮ್ ಪಾವತಿ ಮಾಡಲು ಬೇಕಾದ ಡಿಸ್ಚಾರ್ಜ್ ರಶೀದಿ ಹಾಗೂ ಇಂಡೆಮ್ನಿಟಿ ಬಾಂಡುಗಳನ್ನು ಕಳುಹಿಸಿ ಕೊಡುವಂತೆ ಕೇಳಿಕೊಳ್ಳಲಾಗಿತ್ತು.

ಎಪ್ರಿಲ್ ತಿಂಗಳ ಆದಿಯಲ್ಲಿ ಆತನ ಸಹಿಯುಳ್ಳ ರಶೀದಿ ಹಾಗೂ ಇಂಡೆಮ್ನಿಟಿ ಬಾಂಡ್ ಆಫೀಸಿಗೆ ಬಂದಿದ್ದುವು. ಆತನಿಗೆ ಚೆಕ್ ಅನ್ನು ಎಪ್ರಿಲ್ ಹನ್ನೊಂದನೇ ತಾರೀಖು ಕಳುಹಿಸುವಾಗ ನನಗೆ ಅತೀವ ಆನಂದವಾಯ್ತು – ಇಷ್ಟು ತಡವಾಗಿಯಾದರೂ ಆತನಿಗೆ ಹಣ ಸಿಗುತ್ತದಲ್ಲಾ ಎಂದು. ಕೆಲವು ವಿಮಾದಾರರು ಏಳೆಂಟು ವರುಷಗಳಿಂದಲೂ ತಮಗೆ ಸಲ್ಲಬೇಕಾದ ಹಣವನ್ನು, ಆಫೀಸು ಕೇಳಿದ ದಾಖಲೆಗಳನ್ನು ಕೊಡಲಾಗದೆ, ಕೊಡದೆ, ಇನ್ನೂ ತೆಗೆದುಕೊಳ್ಳದೇ ಇರುವಾಗ ಸೋಮಾ ಸುಗುಣಗಡನ ಕೇಸ್ ಅಷ್ಟೊಂದು 'ಸೀರಿಯಸ್' ಅಲ್ಲವೆನಿಸಿತು.

ಎಪ್ರಿಲ್ ಹತ್ತೊಂಭತ್ತನೇ ತಾರೀಖು ಒಂದು ಕವರ್ ನನ್ನ ಮೇಜಿನ ಮೇಲೆ ಬಿದ್ದಿತ್ತು. ಒಡೆದು ನೋಡಿದೆ. ಸೋಮಾ ಸುಗುಣಗಡನಿಗೆ ಕಳುಹಿಸಿದ್ದ ಕಾಗದ ಮತ್ತು ಚೆಕ್ ವಾಪಸ್ಸು ಬಂದಿತ್ತು. ಕವರಿನ ಮೇಲೆ ಕೆಂಪು ಶಾಯಿಯಲ್ಲಿ ಬರೆದಿದ್ದ ಪೋಸ್ಟ್ ಆಫೀಸಿನ ಷರಾವನ್ನು ನೋಡಿದೆ - "Addressee deceased, Hence returned' (ವಿಳಾಸದಾರರು ಮೃತಪಟ್ಟಿದ್ದಾರೆ. ಆದ್ದರಿಂದ ಹಿಂದಿರುಗಿಸಲಾಗಿದೆ.)



ಜಗತ್ತಿಗೆ ತಾನು ಬುದ್ಧಿ ಹೇಳಬೇಕು ಎನ್ನುವ ಸಾಹಿತಿ ಆ ಜಗತ್ತಿನ ಅಂಗ ತಾನು ಎಂದು ತಿಳಿದೇ, ತನ್ನ ವರ್ತನೆಗಳನ್ನು ಅಳೆದೇ ಪರರಿಗೆ ಹೇಳಲು ಕಲಿಯಬೇಕು. ಇತರರಿಗಿಂತಲೂ ತಾನು 'ಶ್ರೇಷ್ಠ', ಸಮಾಜವನ್ನು ತಾನು ತಿದ್ದಬೇಕಾಗಿದೆ ಎಂದು ತಿಳಿಯುವ ಸಾಹಿತಿ ಪ್ರದರ್ಶನದಿಂದ ತೃಪ್ತನಾಗುತ್ತಾನೆ. ತಾನು ಸಮಾಜದ ಅಂಗ ಎಂದು ತಿಳಿದ ವ್ಯಕ್ತಿ ಹೊಣೆಗಾರನಾಗುತ್ತಾನೆ.

**– ಶಿವರಾಮ ಕಾರಂತ**

ಪತ್ರಿಕಾ ವರದಿ

## ನಮ್ಮ ಇತ್ತೀಚಿನ ಕಾರ್ಯಕ್ರಮಗಳು

### ಮಾದರಿ ವ್ಯಕ್ತಿ ಶಿವರಾಮ ಕಾರಂತ

ಶಿವರಾಮ ಕಾರಂತರಂತಹ ಮೇರು ವ್ಯಕ್ತಿಗಳು ಎಲ್ಲೋ ಕೆಲವು ಶತಮಾನಗಳಿಗೊಮ್ಮೆ ಹುಟ್ಟುತ್ತಾರೆ. ಎಂದು ಖ್ಯಾತ ವಿದ್ವಾಂಸ ಪ್ರೊ. ಎಂ.ಎಚ್. ಕೃಷ್ಣಯ್ಯ ಹೇಳಿದರು.

ಶಿವರಾಮ ಕಾರಂತ ವೇದಿಕೆ, ತರಳಬಾಳು ಕೇಂದ್ರ, ರವೀಂದ್ರನಾಥ ಟ್ಯಾಗೋರ ನಗರ ಸಾಂಸ್ಕೃತಿಕ ಸಂಘ ಮತ್ತು ಆದರ್ಶ ಸಮೂಹ ಸಂಸ್ಥೆಗಳು ಜಂಟಿಯಾಗಿ ಏರ್ಪಡಿಸಿದ್ದ ಶಿವರಾಮ ಕಾರಂತರ 105ನೇ ಹುಟ್ಟುಹಬ್ಬ ಮತ್ತು ಸುವರ್ಣ ಕರ್ನಾಟಕ ಸಂಭ್ರಮದ ಆಚರಣೆ ಸಮಾರಂಭದಲ್ಲಿ ಮಾತನಾಡುತ್ತಿದ್ದರು.



ಅವರು ಒಂದೊಂದು ಕ್ಷೇತ್ರದಲ್ಲಿ ಮಾಡಿದ ಕೆಲಸವನ್ನೂ ತಮ್ಮ ತಮ್ಮ ಜೀವನದಲ್ಲಿ ಸಾಧಿಸುವಂತಹ ವ್ಯಕ್ತಿಗಳು ಬಹಳ ಜನ ಹುಟ್ಟಿಲ್ಲ. ಸಾಹಿತ್ಯದಂತೆ ಚಿತ್ರ, ಶಿಲ್ಪ, ಯಕ್ಷಗಾನ ಮುಂತಾದ ಕ್ಷೇತ್ರಗಳಲ್ಲಿ ಅವರ ಸಾಧನೆ ಅದ್ವಿತೀಯವಾದದ್ದು ಎಂದರು.

ಸಮಾರಂಭ ಉದ್ಘಾಟಿಸಿದ ನ್ಯಾಯಮೂರ್ತಿ ಪಿ. ವಿಶ್ವನಾಥ ಶೆಟ್ಟಿ ಕಾರಂತರ ಬದುಕು ಮತ್ತು ಬರಹಗಳಿಂದ ನಾವು ಮಾರ್ಗದರ್ಶನ ಪಡೆಯಬೇಕು. ಸಮಾಜದ ಋಣ ತೀರಿಸುವ ಉತ್ತಮ ಪ್ರಜೆಗಳಾಗಿ ಉತ್ತಮ ದೇಶವನ್ನು ಕಟ್ಟಲು ಯತ್ನಿಸಬೇಕು ಎಂದರು,

ಶಿವರಾಮ ಕಾರಂತ ವೇದಿಕೆ ಅಧ್ಯಕ್ಷೆ ಪ್ರೇಮಾಭಟ್ ಅಧ್ಯಕ್ಷತೆ ವಹಿಸಿದ್ದರು. ವಿಮರ್ಶಕ ಹಾಗೂ ವೇದಿಕೆ ಉಪಾಧ್ಯಕ್ಷ ಎಸ್. ಆರ್. ವಿಜಯಶಂಕರ್, ಹೇಗೆ ಕಾರಂತರ ಸಾಹಿತ್ಯ ಜಾಗತೀಕರಣದ ಇಂದಿನ ಕಾಲಕ್ಕೂ ಪ್ರಸ್ತುತವಾಗಿದೆ ಎಂದು ಉದಾಹರಣೆ ಸಹಿತ ವಿವರಿಸಿದರು.

ಸಮಾರಂಭದ ಅಂಗವಾಗಿ ವಿಜಯನಗರದ ಕರ್ನಾಟಕ ಕಲಾದರ್ಶಿನಿಯ ಬಾಲ ಕಲಾವಿದರಿಂದ ಯಕ್ಷಗಾನ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

ಈ ಸಂದರ್ಭದಲ್ಲಿ ಮಾತನಾಡಿದ ವೇದಿಕ ಕಾರ್ಯದರ್ಶಿ ಪಾ. ಚಂದ್ರಶೇಖರ ಚಡಗ, ಕಾರಂತರು ಯಕ್ಷಗಾನ ಕಲೆಗೆ ಮಾಡಿದ ಸೇವೆಯನ್ನು ಸ್ಮರಿಸುತ್ತಾ ಹೇಗೆ ಕಥಕ್ಕಳಿ ಕೇರಳದ ಪ್ರಾತಿನಿಧಿಕ ಕಲೆಯಾಗಿ ಬೆಳೆದಿದೆಯೋ ಹಾಗೆ ಯಕ್ಷಗಾನವು ಕರಾವಳಿ ಜಿಲ್ಲೆಗಳಿಗೆ ಸೀಮಿತವಾಗದೆ ಅಖಿಲ ಕರ್ನಾಟಕದ ಕಲೆಯಾಗಬೇಕು ಎಂದು ಹೇಳಿದರು.

ರಾಧಾ ರಾಮಸ್ವಾಮಿ ವಂದಿಸಿದರು.

**ವಿಜಯ ಕರ್ನಾಟಕ, 14.11.2006**

## ಕನ್ನಡ ಕಲಿಕೆಯ ಕೇಂದ್ರ

ಶಿವರಾಮ ಕಾರಂತ ವೇದಿಕೆ ಮತ್ತು ಲಕ್ಷ್ಮೀನಾರಾಯಣ ಚಡಗ ಮೆಮೋರಿಯಲ್ ಚಾರಿಟೇಬಲ್ ಟ್ರಸ್ಟ್ ಇವುಗಳ ಸಂಯುಕ್ತ ಆಶ್ರಯದಲ್ಲಿ ಕನ್ನಡ ಕಲಿಕೆಯ ಕೇಂದ್ರವು, ಸುವರ್ಣ ಕರ್ನಾಟಕ ವರ್ಷದಲ್ಲಿ ಕನ್ನಡೇತರರಿಗೆ ಕನ್ನಡ ಕಲಿಸುವ ಗುರಿಯನ್ನಿಟ್ಟುಕೊಂಡು ನವೆಂಬರ್ ತಿಂಗಳ 19ನೇ ತಾರೀಖಿನ ಭಾನುವಾರದಂದು ಕನ್ನಡ ಕಲಿಕೆಯ ಕೇಂದ್ರವನ್ನು ಶ್ರೀ ಬಿ. ಪಾರ್ಥ ಸಾರಥಿ, ಐ.ಎ. ಎಸ್(ನಿವೃತ್ತ) ಇವರು ಉದ್ಘಾಟಿಸಿದರು. ಆರ್.ಟಿ. ನಗರದ ಆದರ್ಶ ಕಾಲೇಜಿನ ಸಭಾಂಗಣದಲ್ಲಿ ಉದ್ಘಾಟನಾ ಸಮಾರಂಭವು ಸಂಜೆ 4.30ಕ್ಕೆ ಸರಿಯಾಗಿ ನಡೆಯಿತು. ಸುವರ್ಣ ಕರ್ನಾಟಕ ವರ್ಷದಲ್ಲಿ ಕನ್ನಡೇತರರನ್ನು ಕನ್ನಡದ ಜನವಾಹಿನಿಯೊಳಗೆ ಸೇರಿಸಿಕೊಳ್ಳುವ ಘನ ಉದ್ದೇಶವನ್ನು ಹೊಂದಿ ಕೇಂದ್ರವನ್ನು ಆರಂಭಿಸಲಾಗುತ್ತಿದೆ ಎಂದು ಶಿವರಾಮ ಕಾರಂತ ವೇದಿಕೆಯ ಕಾರ್ಯದರ್ಶಿಗಳಾದ ಶ್ರೀ ಪಾ. ಚಂದ್ರಶೇಖರ ಚಡಗರು ತಮ್ಮ ಸ್ವಾಗತ ಭಾಷಣದಲ್ಲಿ ತಿಳಿಸಿದರು.

ಶ್ರೀ ಬಿ. ಪಾರ್ಥಸಾರಥಿಯವರು ಕನ್ನಡ ಕಲಿಕೆಯ ಕೇಂದ್ರವನ್ನು ಉದ್ಘಾಟಿಸುತ್ತಾ ಕನ್ನಡಕ್ಕೆ ಕರ್ನಾಟಕ ಮತ್ತು ಕರ್ನಾಟಕಕ್ಕೆ ಕನ್ನಡ ಇವೆರಡೂ

ಒಂದಕ್ಕೊಂದು ಅನಿವಾರ್ಯವಾಗಿರುವುದರಿಂದಲೂ ಕರ್ನಾಟಕದ ಹೊರಗೆ ಕನ್ನಡಕ್ಕೆ ಯಾವ ಭವಿಷ್ಯವೂ ಇಲ್ಲದಿರುವುದರಿಂದ ಈ ನಾಡಿನಲ್ಲಿ ವಾಸಿಸುವರೆಲ್ಲಾ ಕನ್ನಡವನ್ನು ಕಲಿಯಲೇಬೇಕು ಎಂದು ಒತ್ತಿ ಹೇಳಿದರು. ಅಂದಿನ ಸಭೆಯಲ್ಲಿ ದಿನಾಂಕ 14.11.2006ರಂದು ನಿಧನರಾದ ಕನ್ನಡದ ಹಿರಿಯ ಸಾಹಿತಿ ಶ್ರೀ ಸೂರ್ಯನಾರಾಯಣ ಚಡಗರಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸಲಾಯಿತು. ಶ್ರೀ ಬಿ.ವಿ. ಕೆದಿಲಾಯರು ಮಾತನಾಡಿ ಶ್ರೀ ಸೂರ್ಯನಾರಾಯಣ ಚಡಗರು ಕನ್ನಡಕ್ಕಾಗಿ ಅ.ನ.ಕೃ., ತ.ರಾ.ಸು. ರಾಮಮೂರ್ತಿ ಮುಂತಾದ ಮಹನೀಯರೊಂದಿಗೆ ಹೆಗಲು ಕಟ್ಟಿ ಹೋರಾಡಿದರು ಮತ್ತು ನೂರಾರು ಮಂದಿ ತರುಣ ಲೇಖಕ, ಲೇಖಕಿಯರು ಸಾಹಿತ್ಯ ಪ್ರಪಂಚಕ್ಕೆ ಪಾದರ್ಪಣೆ ಮಾಡುವಂತೆ ಮಾಡಿದರು ಎಂದು ಹೇಳಿದರು. ಶ್ರೀಮತಿ ರಾಧಾರಾಮ ಸ್ವಾಮಿಯವರು ವಂದನಾರ್ಪಣೆ ಮಾಡಿದರು.

## ಎಸ್. ಎಲ್. ಭೈರಪ್ಪನವರ ಸಾಹಿತ್ಯ ಸೇವೆ ಶ್ರೇಷ್ಠವಾದುದು

ಬೆಂಗಳೂರು : 'ಕನ್ನಡ ಕಾದಂಬರಿಕಾರರಲ್ಲಿ ಶಿವರಾಮ ಕಾರಂತರಂತೆ ಎಸ್. ಎಲ್. ಭೈರಪ್ಪನವರ ಸಾಧನೆ ಅನನ್ಯವಾದುದು ಎಂದು ಡಾ. ನಾಗರಾಜ ನೀಲಗುಂದ ಹೇಳಿದರು.

ಆರ್.ಟಿ. ನಗರದ 'ಶಿವರಾಮಕಾರಂತ ವೇದಿಕೆಯ ತಿಂಗಳ ಕಾರ್ಯಕ್ರಮದ ಮುಖ್ಯ ಅತಿಥಿಯಾಗಿ ಅವರು ಮಾತನಾಡಿದರು.

ಭೈರಪ್ಪನವರ ಅನುಭವ ಶ್ರೀಮಂತಿಕೆ ಈ ತಲೆಮಾರಿನ ಇನ್ನಾವ ಲೇಖಕನಿಗೂ ಇಲ್ಲ. ಅವರ ಕೃತಿಗಳಲ್ಲಿ ಅನುಭವ, ವೈಚಾರಿಕತೆ, ಚಿಂತನೆ, ರಂಜನೆ, ಜೀವನ ವಿಮರ್ಶೆ, ಮೌಲ್ಯ ಶೋಧನೆ ಮತ್ತು ವಸ್ತು ವೈವಿಧ್ಯತೆ ಮುಂತಾದ ಉತ್ತಮ ಸಾಹಿತ್ಯ ಕೃತಿಯಲ್ಲಿರಬೇಕಾದ ಗುಣಗಳು ಧಾರಳವಾಗಿವೆ. ಜನಪ್ರಿಯತೆ ಹಾಗೂ ಶ್ರೇಷ್ಠತೆಗಳು ಅವರ ಕಾದಂಬರಿಗಳಲ್ಲಿ ಮೇಳೈಸಿವೆ. ದೇಶ ವಿದೇಶಗಳಲ್ಲಿ ಅತ್ಯಂತ ಜನಪ್ರಿಯತೆಯನ್ನು ಗಳಿಸಿರುವ ಕಾದಂಬರಿಕಾರರಾದ ಇವರ ಬಗ್ಗೆ ವಿಮರ್ಶೆಯ ನ್ಯಾಯ ಇನ್ನೂ ದೊರೆತಿಲ್ಲ ಎಂದು ಅಭಿಪ್ರಾಯಪಟ್ಟರು.

ಇಸಂ ಗಿಂತ 'ಇಸಮು' (ಗ್ರಾಮೀಣರು ಮನುಷ್ಯ ಎಂಬ ಅರ್ಥದಲ್ಲಿ ಉಪಯೋಗಿಸುವ ಪದ) ಸರಿಯಾಗಿರಬೇಕು. ಈ ಮಾತನ್ನು ಸಾಹಿತಿಗಳಿಗೂ

ಆಸ್ವಾಯಿಸಬೇಕು. ಮನುಷ್ಯ ಶ್ರೇಷ್ಠನಾಗಿದ್ದರೆ ಅವನು ರಚಿಸುವ ಸಾಹಿತ್ಯವೂ ಶ್ರೇಷ್ಠವಾಗಿರುತ್ತದೆ. ಭೈರಪ್ಪ ಈ ದೃಷ್ಟಿಯಲ್ಲಿ ಹೇಗೆ ಒಬ್ಬ ಶ್ರೇಷ್ಠನಾದ ಮನುಷ್ಯ ಆಗಿದ್ದಾರೆ, ಹಾಗೂ ಅವರು ರಚಿಸಿದ ಕಾದಂಬರಿಗಳು ಕೃತಿಗಳಾಗಿವೆ ಎಂಬುದನ್ನು ವಿವರಿಸಿದರು.

ಸೃಜನಶೀಲತೆಗೆ ಬದುಕಿನ ಭದ್ರವಾದ ಅನುಭವ ಅಗತ್ಯ. ಕಾರಂತರು ಹಾಗೂ ಭೈರಪ್ಪನವರು ಹೋರಾಟದ ಬದುಕನ್ನು ನಡೆಸುತ್ತಾ ಸತ್ಯಾನ್ವೇಷಣೆ ಮಾಡುತ್ತಾ ಕಂಡುಕೊಂಡ ಅನುಭವಕ್ಕೆ ಸಾಹಿತ್ಯದ ಸ್ವರೂಪವನ್ನು ಕೊಟ್ಟು ಶ್ರೇಷ್ಠ ಕೃತಿಗಳನ್ನು ಕನ್ನಡಿಗರಿಗೆ ಕೊಟ್ಟಿದ್ದಾರೆ. ಎಂದರು.

ಇದರಿಂದ ಅವರ ಕೃತಿಗಳು ಕಾಲಮಾನದಲ್ಲಿ ಉಳಿದ ಕೃತಿಗಳಾಗಿವೆ. ಕನ್ನಡದ ಸಹೃದಯ ವಾಚಕರು ಇಂದು ಬಹಳ ಪರಿಪಕ್ವರಾಗಿದ್ದಾರೆ. ಯಾರನ್ನು ಓದಬೇಕು ? ಏನನ್ನು ಓದಬೇಕು ? ಎಂಬ ವಿವೇಕ ಕನ್ನಡಿಗರಿಗೆ ಇದೆ. ಇದನ್ನು ಪರಿಗಣಿಸದೆ ಬರಿಯ ಪೋಸು ಕೊಡುವ ಕನ್ನಡದ ಸಾಹಿತಿಗಳು ಯಜಮಾನ ಸಂಸ್ಕೃತಿ / ಪಾಳೇಗಾರಿಕೆಯ ಮನೋಭಾವದವರಾಗಿದ್ದು ಇತರ ಸಾಹಿತಿಗಳು ಹೇಗೆ ಬರೆಯಬೇಕೆಂದು ಬೊಟ್ಟು ಮಾಡಿ ತೋರಿಸುವ ಧೋರಣೆಯನ್ನು ತಳೆದಿರುವುದನ್ನು ನಾವು ಕಾಣಬೇಕು. ಈ ದಿಸೆಯಲ್ಲಿ ನಮ್ಮ ವಿಮರ್ಶಕರು ಭೈರಪ್ಪರನ್ನು ಕಡೆಗಣಿಸಿದ್ದಾರೆ. ಆದರೆ ಭೈರಪ್ಪನವರ ಬೆಲೆ ಮತ್ತು ತೂಕ ದಿನದಿನಕ್ಕೆ ಬೆಳೆಯುತ್ತಿದೆ ಎಂದು ಅಭಿಪ್ರಾಯಪಟ್ಟರು.

ಬಿ.ವಿ. ಕೆದಿಲಾಯರು ಅಧ್ಯಕ್ಷತೆವಹಿಸಿದ್ದರು. ವೇದಿಕೆಯ ಕಾರ್ಯದರ್ಶಿ ಪ್ರಾ. ಚಂದ್ರಶೇಖರ ಚಡಗ ಸ್ವಾಗತಿಸಿದರು. ಡಾ. ಆರ್. ಆರ್. ಪಾಂಗಾಳ ವಂದಿಸಿದರು. ರಾಧಾರಾಮ ಸ್ವಾಮಿ ಕಾರ್ಯಕ್ರಮ ನಿರ್ವಹಿಸಿದರು.

**ವಿಜಯ ಕರ್ನಾಟಕ, 17.12.06**



ಕವನ

# ಸುವರ್ಣ ಕರ್ನಾಟಕ

- ಪಾ. ಚಂದ್ರಶೇಖರ ಚಡಗ

೧

ಕರ್ನಾಟಕ ಮಾತೇ,
ನಮ್ಮದೆಲ್ಲಾ ಬರಿ ಮಾತೆ
ಕಟ್ಟುವೆವು ಹೊಸ ಕರ್ನಾಟಕವನು
ಎನ್ನುವ ನಾಟಕವನು
ದಿನದಿನವೂ ಆಡುವೆವು
ನವಂಬರ್ ತಿಂಗಳ ಕನ್ನಡಿಗರು ನಾವು
ಕುರಿತೋದದ ಪರಿಣತಮತಿಗಳು ನಾವು
ಬರೆಯಿರಿ ಪುಸ್ತಕಗಳ ನೀವು
ಓದದಿದ್ದರೂ, ಅರಿಯದಿದ್ದರೂ,
ಇಂಗ್ಲಿಷ್ ಕೃತಿಗಳ ಹೊಗಳುವೆವು
ಕನ್ನಡ ಕೃತಿಗಳ ತೆಗಳುವೆವು
ಅದಕಿದೆ ಕಾರಣ ಖಾಸಾ
ಕನ್ನಡ ಸಾಹಿತ್ಯ ಬೂಸಾ !

೨

ಓಹೋ ಓಹೋ ಬಂತೈ ಬಂತೈ
ಪಶ್ಚಿಮ ದಿಕ್ಕಿನ ಬಿರುಗಾಳಿ
ಅಡುಗೆಯ ಮನೆಗೂ ಇಂಗ್ಲಿಷ್ ಧಾಳಿ
ಇಂಗ್ಲೆಂಡಿನ ರಾಣಿ ನಮ್ಮೆಲ್ಲರ ಮಾತೆ
ಕನ್ನಡ ಪದಗಳ ನುಡಿದರೆ ಜಾಗ್ರತೆ
ಎನ್ನುವ ಕಾನ್ವೆಂಟುಗಳೇ ಎಲ್ಲೆಲ್ಲೂ
ಪಂಪ ರನ್ನರ ಹೆಸರೇ ಕೇಳಿಲ್ಲ
ಕಾರಂತ ಕುವೆಂಪು
ತಿಳಿದೇ ಇಲ್ಲ
ಕನ್ನಡ ನಾಡು ಚಿನ್ನದ ನಾಡು
ಬಡವಗೆ ಅನ್ನವೂ ದೊರೆಯದ ಕಾಡು
ಕೋಲಾರದ ಚಿನ್ನದ ಗಣಿಯಲಿ ಇಂದು
ಚಿನ್ನವೂ ಮಾಯ ಕನ್ನಡವೂ ಮಾಯ
ಕಾಡನು ಕಡಿದು ಗಣಿಗಳನಗೆದು
ಮಾರಿ ತಿನ್ನುವ ಮಾರಿಗಳು ನಾವು
ನಡೆದಿದೆ ಕನ್ನಡಿಗರ ಬೆನ್ನೇರಿ
ಕನ್ನಡೇತರರ ಭಾರಿ ಸವಾರಿ
ಮಾತೆಯ ಮೊಗದಲಿ ನಗುವೇ ಇಲ್ಲ
ಕನ್ನಡೇತರರಿಗಿದೇ ಸುವರ್ಣ
ಕನ್ನಡಿಗರ ಮುಖ ಮಾತ್ರ ವಿವರ್ಣ



# ಅಡಿಗರು ಮತ್ತು ಸಪಾಟಿಲ್ಲದ ನೆಲ.

**-ಡಿ.ಎಸ್.ರಾಮಸ್ವಾಮಿ**

ಅಡಿಗರ ಕವಿತೆಗಳನ್ನು ಧ್ಯಾನಿಸುವುದೆಂದರೆ, ಪರಂಪರೆಯ ಬೇರುಗಳೊಳಕ್ಕೆ ಇಳಿಯುತ್ತಲೇ, ವರ್ತಮಾನದ ಸಂಕಟಗಳನ್ನು ಮೀರುವ ಯತ್ನಗಳೆಂದು ನಾನು ಭಾವಿಸಿದ್ದೇನೆ. ಅಂತರಂಗದ ವ್ಯಾಪಾರಗಳನ್ನು ಅನುದಿನದ ವಿದ್ಯಮಾನಗಳೊಂದಿಗೆ ಸಮೀಕರಿಸುತ್ತಲೇ, ನಾಳಿನ ಕನಸಗಳನ್ನೂ ನೇಯ್ದು ದಿಟ್ಟ ಸಾಕ್ಷಿಪ್ರಜ್ಞೆಯ ಅಡಿಗರನ್ನು ಸದ್ಯೋವರ್ತಮಾನದ ಅದೆಷ್ಟು ಹೊಸ ಕವಿಗಳು ಓದಿಕೊಂಡಿದ್ದಾರೋ, ಇಲ್ಲವೋ, ನನಗಂತೂ ಅಡಿಗರ ಕಾವ್ಯವೆನ್ನುವುದು ಮೊಗೆದಷ್ಟೂ ತುಂಬಿಕೊಳ್ಳುವ ತೊರೆ, ಅಗೆದಷ್ಟೂ ಆಳಕ್ಕಿಳಿಸುವ ಗಣಿ, ಕೇಳಿಸಿಕೊಂಡಷ್ಟೂ ಉಳಿಯುವ ಅನುಮಾನದ ಕಣಿ.

ಅಡಿಗರ ಕವಿತೆಗಳನ್ನು ಕುರಿತು ಮಾತನಾಡುವಾಗಲೆಲ್ಲ ಅವರ 'ವರ್ಧಮಾನ', 'ಶ್ರೀ ರಾಮ ನವಮಿಯ ದಿವಸ', 'ಪ್ರಾರ್ಥನೆ', 'ಭೂಮಿಗೀತ', 'ಭೂತ', ಇಂಥ ಕವಿತೆಗಳನ್ನೇ ಎತ್ತಿ ಆಡುವುದರ ಜೊತೆಗೇ ಅಪರೂಪಕ್ಕೆ 'ಕಟ್ಟುವೆವು ನಾವು', 'ಮೋಹನ ಮುರಳಿ', ಥರದ ಹಾಡುಗಳೂ ಆಗೀಗ ತಲೆ ಹಾಕುತ್ತವೆ. ಅಡಿಗರ ಕಾವ್ಯವನ್ನು ಕುರಿತು ಅತ್ಯಂತ ಗೌರವ ಮತ್ತು ಆಕರ್ಷಣೆಗಳನ್ನು ಇಟ್ಟುಕೊಂಡಿರುವಂತೆಯೇ ಅವರ ರಾಜಕೀಯ ನಿಲುವುಗಳನ್ನು ಓದಿಕೊಂಡು ಗೊಂದಲಗೊಂಡಿರುವ ಮತ್ತು ಆ ಕಾರಣಕ್ಕಷ್ಟೇ ಅವರನ್ನು ವಿರೋಧಿಸುವ ನನ್ನ ಕಮ್ಯುನಿಷ್ಟ್ ಬುದ್ಧಿ ಭಾವನೆಯ ಲಾಂದ್ರದ ಬೆಳಕನ್ನು ಬೇಕಂತಲೇ ಹೆಚ್ಚಿಸಿಕೊಂಡು ಈ ಬರಹಕ್ಕೆ ನನ್ನನ್ನು ಒಡ್ಡಿಕೊಳ್ಳುತ್ತಿದ್ದೇನೆ.

ಅಡಿಗರ ಕಾವ್ಯದ ಮುಖ್ಯ ಲಕ್ಷಣಗಳಾದ ಪ್ರತಿಮೆ ಮತ್ತು ಸಂರಚನೆಯ ಕ್ಲಿಷ್ಟತೆಯು ಅವರ ಕಡೆಕಡೆಯ ಸಂಕಲನಗಳಲ್ಲಿ ಅಷ್ಟು ಢಾಳಾಗಿ ವಿಜೃಂಭಿಸಿಲ್ಲವೆಂಬ ವಿಮರ್ಶಕರ ಮಾತುಗಳನ್ನೂ ಇಲ್ಲಿ ನೆನೆಯಲೇ ಬೇಕು. ಅವರ ಕವಿತೆಗಳು ನಮ್ಮ ಏಕಾಂತದ ಓದಿಗೆ ಕಾಣಿಸುವ ಆಪ್ತತೆ ಮತ್ತು ಅನುಭೂತಿಗಳನ್ನು ಅವರ ಕಡೆಯ ಕಾಲದ ಕವಿತೆಗಳಲ್ಲೂ ಹುಡುಕಿ ಸೋತಿದ್ದೇನೆ. ಒಣ ಭಾಷಣದಂತೆ, ಸಿನಿಕ ಮನಸ್ಸಿನ ರೂಕ್ಷ ಗೊಣಗಾಟದಂತೆ ಕಾಣಿಸಿದರೂ, ಅಲ್ಲೂ ಆತ್ಮ ನಿವೇದನೆಯ ಸ್ವಗತದ ಮಾತುಗಳು, ವ್ಯವಸ್ಥೆಯ ಬಗೆಗಿನ ಕ್ರೋಧ ತುಂಬಿದ ಅನುಮಾನಗಳು, ಈಚೆ ಉಳಿಯದ ಆಚೆ ಹಾರದ 'ಉಭಯ ಸಂಕಟ'ದ ಬಿಕ್ಕಟ್ಟುಗಳೂ ಉಳಿದು ಕೊಂಡೇ ಇವೆ. ಅಲ್ಲಿ-ಇಲ್ಲಿ ಆವೇಶದ ಸಿದ್ಧಾಂತದ ಮಂಡನೆ, ಅನ್ಯರ ನಿಂದನೆ, ಚುಚ್ಚುವ-ಕಚ್ಚುವ ಮಾತುಗಳು ಕಂಡರೂ, ತಾವು ನೆಚ್ಚಿಕೊಂಡದ್ದನ್ನು ಈಗಾಗಲೇ ತಮ್ಮ ಪದ್ಯಗಳಲ್ಲಿ ಹೇಳಿದ್ದನ್ನೇ ಇಂಥ ಸಾಧಾರಣ ಪದ್ಯಗಳಲ್ಲೂ ವಿಸ್ತರಿಸಿರುವುದೇ ಹೆಚ್ಚುಗಾರಿಕೆಯಾಗಿದೆ. ಕಾವ್ಯದ ಸಂರಚನೆಯ ಕ್ಲಿಷ್ಟತೆಯನ್ನು ಸರಳತೆಯತ್ತ ಒಯ್ದದ್ದೂ ಈ ಕವಿತೆಗಳೇ ಆಗಿವೆ. ಅವರ ಧ್ಯಾನಸ್ಥ ವಿಷಯಾನುಕ್ರಮಣಿಕೆ ಮಾತ್ರ ಬೆಂಬಿಡದೇ ಇರುವುದೂ ಶ್ರುತವಾಗುತ್ತದೆ.

ಈಗಿನ ನಮ್ಮ ತಲೆಮಾರಿನ ಕವಿಗಳಲ್ಲನೇಕರು ಕಿವಿ-ಕಣ್ಣುಗಳ ಸೂಕ್ಷ್ಮವಿಲ್ಲದೇ ತಮಗೆ ತೋಚಿದ್ದನ್ನು ಗೀಚುವುದನ್ನೇ ಕಾವ್ಯ ವ್ಯವಸಾಯವೆಂದು ಭಾವಿಸಿರುವಾಗ, ಅಡಿಗರ ಕಾವ್ಯದ ಓದು, ಇಂಥ ಮನಸುಗಳಿಗೆ ಹೊಚ್ಚ ಹೊಸ ವ್ಯಾಖ್ಯಾನವನ್ನು ನೀಡುತ್ತಲೇ ಕವಿತೆಯ ರಚನೆಯಲ್ಲಿ ಉಪಯೋಗಿಸಿಕೊಳ್ಳಬಹುದಾದ ಪ್ರತಿಮೆ, ಲಯ ವಿನ್ಯಾಸ, ಪರಂಪರೆಯ ಅನುಸಂಧಾನಗಳನ್ನು ತಿಳಿಸುತ್ತ ನಿಜ ಕವಿಯು ವರ್ತಮಾನದ ಸಂಕಟಗಳನ್ನು ಪರಿಭಾವಿಸಬೇಕಾದ ರೀತಿಯನ್ನೂ ಮನನ ಮಾಡಿಕೊಡುತ್ತವೆ.

ದುರಂತವೆಂದರೆ ಬಂಡಾಯದ ಘೋಷಣೆಯನ್ನು, ನವೋದಯದ ರಮ್ಯತೆಯನ್ನು ಉಳಿಸಿಕೊಂಡಿರುವ ನಮ್ಮ ಅನೇಕ ಕವಿಗಳಿಗೆ ಅಡಿಗರು ಆ ಕಾಲದಲ್ಲೇ ಆವಿರ್ಭಸಿಕೊಂಡ ಸಂಗತಿಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವೇ ಆಗದಿರುವುದೂ, ಈ ಕವಿಗಳ ಓದಿನ ಕೊರತೆಯೋ ಅಥವಾ ಅಡಿಗರಂಥವರನ್ನು ಅವಜ್ಞೆಗೊಳಿಸುವ ಹುನ್ನಾರದ ನೆಲೆಯೋ ನನಗಂತೂ ಅರ್ಥವಾಗುವುದಿಲ್ಲ.

ಅಡಿಗರ ರಾಜಕೀಯ ಧೋರಣೆಯಿಂದಾಗಿ ಇಂಥ ಅವಜ್ಞೆಗಳನ್ನು ನಾವು ಧರಿಸಿದೆವೋ ಅಥವಾ ಅವರ ಕಟ್ಟಾ ಸಂಪ್ರದಾಯಶರಣತೆಯೇ– ಸ್ವತಃ ಉದಾರವಾದಿಗಳೆಂದು ನಮ್ಮನ್ನು ನಾವೇ ಭಾವಿಸಿಕೊಂಡವರಿಗೆ– ಅರ್ಥವಾಗದ ಕಬ್ಬಿಣದ ಕಡಲೆಯಾಗಿದ್ದಕ್ಕೋ ಅಂತೂ ಅಡಿಗರ ಕಾವ್ಯಕ್ಕೂ ಅವರ ಬದ್ಧತೆಗೂ ಒಂದು ಬಗೆಯ ಕಂದಕವಿದ್ದುದನ್ನು ಗಮನಿಸಲೇಬೇಕು. ಪರಂಪರೆಯೊಂದಿಗೆ ಅನುಸಂಧಾನ ನಡೆಸುತ್ತಲೇ ಬಂದ ಅಡಿಗರ ಕಾವ್ಯವನ್ನು ಪುನಃ ಪುನಃ ಓದುತ್ತ, ಆನಂದಿಸುತ್ತ, ಮತ್ತೆ ಅವರ ಕಾವ್ಯವು ನಮ್ಮ ಮನದಾಳದಲ್ಲಿ ಹುಟ್ಟಿಸುವ ಚಿಂತನೆಗಳನ್ನು ಸುಟ್ಟು, ಸೋಸಿ, ಪರಿಶುದ್ಧವಾದುದೇನಾದರೂ ಉಳಿಯಬಹುದೇನೋ ಅನ್ನುವ ಆಶಯವನ್ನು ಅವರದೇ ಪದ್ಯಗಳ ಮೂಲಕ ಗುರುತಿಸ ಹೊರಟರೆ;

'ಗಹ್ವರದ ಒಳಗತ್ತಲಲ್ಲಿ ಸುತ್ತಲು ತಡಕಿ ತಡೆದು ನಡೆಯುವ<br>
ನಡೆದು ಮುಗ್ಗರಿಸಿ ಬಿದ್ದೆದ್ದು ಹರೆವ, ಹರಿಯುವ ಜಾಡು<br>
ಹಿಡಿವ, ಗುರುತಿಸುವ, ಬೇರ ಬಗೆವ, ಕಳೆದದ್ದನ್ನು ಪಡೆವ<br>
ಪಡೆದದ್ದಕ್ಕೆ ಪಡಿಹತ್ತು ಹಡೆವ ಕವನದ ಕರಡು<br>
ಸಿದ್ಧಪಡಿಸುವ ಕಾವ್ಯ ವರ್ಧಮಾನಗೆ. . . . . . . . . .'(ವರ್ಧಮಾನ)

ಮತ್ತೆ ಮತ್ತೆ ಕಳೆದುದನ್ನೇ ಹುಡುಕುವ, ಅದರಲ್ಲೇ ಸಂಭ್ರಮಿಸುವ ಆದರೆ ವರ್ತಮಾನದ ಬಾಯಾರಿಕೆಯನ್ನು ತಣಿಸದ ಪರಂಪರೆಯಾಳದಲ್ಲೇ ಉಳಿದು ಬಿಡುವ ಅಡಿಗರ ಕಾವ್ಯದ ಬೇರುಗಳು, ಚರಿತ್ರೆಗೆ ಸಂದ ಗುರುತುಗಳು ಮಾತ್ರವೋ ಅಥವಾ ಚರಿತ್ರೆರಹದಾರಿಯ ಅಳತೆಗೆ ಹಾಕಿರುವ ಮೈಲುಗಲ್ಲುಗಳೋ ಎನ್ನುವ ದ್ವಂದ್ವ ಕಾಡತೊಡಗುತ್ತದೆ. ಭವ್ಯ ಭಾರತದ ಕನಸುಗಳನ್ನು ಕಟ್ಟುತ್ತಲೇ ಭೂತದ ನೆರಳಲ್ಲೇ ಅಂಡಲೆಯುವ ವರ್ತಮಾನದ ಮನಸ್ಸುಗಳಿಗೆ ಅದು ಮುಟ್ಟಿಸುವ ವ್ಯಾಕುಲತೆ ಮಾತ್ರ ವಿಶಿಷ್ಟವಾದುದು.

'. . . . . . . . ಮುತ್ತಜ್ಜ ಕಟ್ಟಿದ ಮನೆ<br>
ದೀಪ ಹಚ್ಚುವವರಿಲ್ಲ; ಶ್ರದ್ಧೆ ಕೊಡುವನ್ನ ನೀರಿಲ್ಲದೆಯೆ<br>
ಉರುಳುವರು ಪಿತೃ ಪಿತಾಮಹರು. ಹೊಕ್ಕಳಿನ ಬಳ್ಳಿ<br>
ಕತ್ತರಿಸಬಾರದೋ ಏನೋ, ಬಿತ್ತಕ್ಕೆ ಬೇರಿನ ಚಿಂತೆ ಇಲ್ಲ.' (ವರ್ಧಮಾನ)

ಈ ಸಾಲುಗಳನ್ನು ಮತ್ತೆ ಮತ್ತೆ ಗಮನಿಸದರೆ ಶ್ರುತವಾಗುವುದು "ಬಿತ್ತಕ್ಕೆ ಬೇರಿನ ಚಿಂತೆ ಇಲ್ಲ". ಅಂದರೆ ಯಾವತ್ತೂ ಹೊಸ ತಲೆಮಾರಿಗೆ ಭವಿಷ್ಯದ ಚಿಂತೆ ಮತ್ತು ಯೋಚನೆಗಳ ಹಾಗೇ ಭೂತದ ಬೇರುಗಳ ತಿಳುವಳಿಕೆಯೂ ಬೇಕು. ಹೊಸತು ಹಳತುಗಳ ಯುಗಪಲ್ಲಟದಲ್ಲಿ ಪರಂಪರೆಯೊಂದಿಗೆ ವ್ಯಕ್ತಿಯ ಸಂಕೀರ್ಣ

ಸಂಬಂಧವನ್ನು, ಅವುಗಳ ದ್ವಂದ್ವವನ್ನು ಮತ್ತು ಆ ಮೂಲಕ ಹುಟ್ಟುವ ಸವಾಲುಗಳಿಗೆ ಒಬ್ಬ ಕವಿ ಸ್ವತಃ ಕಂಡುಕೊಳ್ಳಬೇಕಾದ ಉತ್ತರಗಳನ್ನೂ ಅಡಿಗರ ಕಾವ್ಯ ಕಟ್ಟಿಕೊಟ್ಟಿದೆ. ಈ ಮಾತಿಗೆ ಅವರ 'ಕೂಪ ಮಂಡೂಕ' ಕವಿತೆಯ

'ಗೂನೆ ಮಾಗಿ ಬಾಳೆ ಜೀವನ್ಮುಕ್ತ ಹಳಸುತಿದೆ

ಹಿಂಡು ಹಿಳ್ಳುಗಳಲ್ಲಿ ಪ್ರಾಣ ಊರಿ,'

ಎನ್ನುವ ಸಾಲುಗಳಲ್ಲಿ ವರ್ತಮಾನದ ಅಸಂಖ್ಯ ಚೇತನಗಳು ಏಕತ್ರಗೊಂಡಿದ್ದ ಪೂರ್ವಸೂರಿಗಳಿಂದ ಬೇರೆಯಾಗಿ ಹರಿದು ಹಂಚಿಹೋಗಿರುವ ಚೈತನ್ಯವೆಂದೇ ನನಗನ್ನಿಸುತ್ತದೆ.

ಅಡಿಗರ ಅನೇಕ ಕವಿತೆಗಳ ಸಾಲುಗಳನ್ನು ಈ ಮಾತಿಗೆ ನಿದರ್ಶನವಾಗಿ ಕಾಣಿಸಬಹುದಾದರೂ, ಅವರು ಪದ್ಯಗಳ ಮೂಲಕವೆ ಕಟ್ಟಿಕೊಡುತ್ತಿದ್ದ ಅವರ ಪದ್ಯಗಳ ನಿರೂಪಕ ನಮ್ಮೆಲ್ಲ ಪರಂಪರೆ, ಮತಧರ್ಮ, ಇತಿಹಾಸಗಳಿಂದ ಪಡೆದ ದರ್ಶನಗಳ ಒಟ್ಟು ಮೊತ್ತ. ಅಂತೆಯೇ ಸುಳ್ಳು, ತಟವಟ, ವಂಚನೆ, ಅಮಲುಗಳನ್ನು ಪ್ರಶ್ನಿಸಿದ ಧೀಮಂತ. ಸಾಂಸ್ಥಿಕ ಸ್ವರೂಪದ ಮತಧರ್ಮವನ್ನೆಂದೂ ನಂಬದ ಹಾಗೆಯೇ ಇತಿಹಾಸದ ವಕ್ತಾರಿಕೆಯಲ್ಲಿ ವಿಶ್ವಾಸವನ್ನೂ ಇಡದ ಆದರೆ ಇದ್ದುದನ್ನು ಇದ್ದ ಹಾಗೆ ಪ್ರಶ್ನಿಸುತ್ತಿದ್ದ/ ಧ್ಯಾನಿಸುತ್ತಿದ್ದ ಅಡಿಗರ ಚಿಂತನ ಕ್ರಮ ಈ ಹೊತ್ತಿನ ಜಾಗತೀಕರಣ ಸಂದರ್ಭದಲ್ಲಿ ಬೇರೆ ಬೇರೆಯದೇ ಆದ ಚಿಂತನ ಕ್ರಮಗಳನ್ನು ಹುಟ್ಟಿಸಬಹುದೆನ್ನುವ ವಿಚಾರವೇ ಈ ಲೇಖನದ ಧಾತುವಾಗಿದೆ.

ಈಗ ನನ್ನನ್ನು ಬಹಳವಾಗಿ ಕಾಡುವ ಆದರೆ ಹೆಚ್ಚು ಚರ್ಚೆಯಾಗದ ಅವರ 'ನೆಲ ಸಪಾಟಿಲ್ಲ' ಕವಿತೆಯನ್ನು ಮೇಲೆ ಹೇಳಿದ ಜಾಗತೀಕರಣ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳಲು ಯತ್ನಿಸುತ್ತಿದ್ದೇನೆ. ಪದ್ಯ ಶುರುವಾಗುವುದು ಹೀಗೆ–

'ನೆಲ ಸಪಾಟಿಲ್ಲ; ಹೊಳೆ, ಕೆರೆ, ಬಾವಿ, ಹಳ್ಳ, ಕೊಳ್ಳ

ಗೊಬ್ಬರ ಗುಂಡಿ–ಹೀಗೆ

ತಗ್ಗುಗಳು, ಏರುಗಳು, ಮುಗ್ಗರಿಸುವುದು ಸಹಜ.'

ಇಡೀ ಜಗತ್ತು ಇವತ್ತಿನ ಸಂದರ್ಭದಲ್ಲಿ ಪುಟ್ಟಹಳ್ಳಿಯಂತಾಗಿರುವ ಹೊತ್ತಲ್ಲಿ ಈ ಕವಿತೆಯ ಬೆಳಕಲ್ಲಿ ಕಾಣಿಸಬಹುದಾದ ಹೊಸ ಟೀಕುಗಳಿಗೆ ಒಪ್ಪಿಕೊಳ್ಳದೇ ಇರಲು ಸಾಧ್ಯವೆ? ನಾವೆಲ್ಲ ನಿತ್ಯ ತುಳಿಯುತ್ತಿರುವ ಇದೇ ನೆಲ ಅವರವರ ಭಾವಕ್ಕೆ, ಅವರವರ ಭಕುತಿಗೆ ಒಲಿಯುವ, ಸಪಾಟಿಲ್ಲದ ಕಾರಣ ಸುಲಭವಾಗಿ ಹಿಡಿತಕ್ಕೆ ಸಿಕ್ಕದ, ಸಿಕ್ಕಿದುದೆಲ್ಲವನ್ನೂ ಒಳಗೊಳ್ಳುವಂತಹುದು. ಮತ್ತು ಆ ಕಾರಣಕ್ಕೇ ಹಿಡಿಯ ಹೊರಟವರೆಲ್ಲ ಯಾಮಾರುತ್ತಿರುವುದು.

'ತಗ್ಗುಗಳಲ್ಲಿ ನೀರು ತುಂಬುತ್ತದೆ. ಸಕಲ ಕುಂಡೀ ತೀರ್ಥ

ಯಾರಿಗೂ ಬೇಡ. ಹರಿವ ನೀರೆಂಥದೇ ಇರಲಿ ಯಾವುದೇ

ಅಭ್ಯಂತರಗಳಿಲ್ಲ.

ಬಾವಿಯ ನೀರು ಕುಡಿಯಲಾಗುತ್ತದೆ, ಕೆಸರು ತುಂಬಿದ್ದರೂ, ಪಾಚಿ ಮುಚ್ಚಿದ್ದರೂ ಕೂಡ.'

ಈ ಸಾಲುಗಳನ್ನು ಶ್ರೇಣೀಕೃತ ಸಮಾಜದ ಚಿತ್ರಣವೆಂದು ಭಾವಿಸಿಕೊಂಡ ಕ್ಷಣದಲ್ಲೇ ಇಡೀ ಕವಿತೆ ನಮ್ಮನ್ನೊಯ್ಯುವ ಪರಿಜುಗಳ ಎತ್ತರ ಸರಳೀತ ನಿಲುಕುವಂಥದ್ದಲ್ಲ. ತಗ್ಗಿದ್ದಲ್ಲೆ ಹೊರಳುವ ನೀರಿನ ಹಾಗೆ ಶ್ರೀಮಂತಿಕೆ ಮತ್ತು ಅದರ ಹಿಂದೇ ಬರುವ ಘನತೆ, ಗೌರವಗಳು. ಆ ಕಾರಣದಿಂದಾಗಿಯೇ ಅದು ಸಹಿಸಿಕೊಳ್ಳಲೇ ಬೇಕಾದ ಅಂದರೆ ಜೀರ್ಣಿಸಿಕೊಳ್ಳಲೇಬೇಕಾದ ಅನಿವಾರ್ಯಗಳಾಗುತ್ತವೆ.

'ಆದರೆ ಎಷ್ಟೊಂದು ಭವ್ಯವಿದ್ದರೂ ಕೂಡ ಕಡಲ ನೀರ ಕುಡಿಯಲಾಗುವುದಿಲ್ಲ.
ನೀರಿನ ಮೇಲೆ ಜಗದಾತ್ಮ ಸೂರ್ಯನ ಲಕ್ಷ ಲಕ್ಷ ಕಿರಣಗಳು ಆಡತೊಡಗಿದರೆ
ಜುಮ್ಮು, ಕಂಪನ, ರೂಪಚ್ಛೇದ, ರೂಪಾಂತರ;
ಆವಿಯಾದಗಲೇ ನೀರು
ಶುದ್ಧ ಸ್ವರೂಪ, ಆಕಾಶ ಪ್ರತಾಪ, ವಿದ್ಯುದ್ದೀಪ, ಧಾರಾಕಾರಸೇಕ.'

ಈಗ ಈ ಕವಿತೆ ಹೊರಳಿದ ದಿಕ್ಕೇ ಬೇರೆ. ಹೇಗೆ ಎಷ್ಟೆಲ್ಲ ನೀರಿದ್ದರೂ ಸಮುದ್ರದ ನೀರು ಕುಡಿಯಲು ಬರುವುದಿಲ್ಲವೋ ಹಾಗೆಯೇ ಏನೆಲ್ಲ ಬೊಗಳೆ, ವಂಚನೆ, ಮೋಸಗಳ ನಡುವೆ ದಿಕ್ಕು ತಪ್ಪಿದ ಹೊತ್ತಲ್ಲೂ ನವನಿರ್ಮಾಣದ ಕಾರಣದಿಂದಾಗಿ ಹೊಸ ಜಗತ್ತನ್ನು ಸೃಷ್ಟಿಸಲು ಸಾಧ್ಯ. ಅರಿವಿನ ಸೂರ್ಯನ ಕಿರಣಗಳು ಜಗತ್ತಿನ ತುಂಬೆಲ್ಲ ಹರಿದಾಡಿದರೆ ಹುಟ್ಟುವ ಕಂಪನಗಳಲ್ಲಿ ರೂಪಾಂತರಗೊಂಡು ಶುದ್ಧ ಸ್ವರೂಪವನ್ನು ಪಡೆಯುವ ದಾರಿಯೂ ಇದೆ. ಅದನ್ನು ಸಾಧ್ಯವಾಗಿಸುವ ಕಲೆ ಮತ್ತದರ ಬೆಲೆ ನಮಗೆ ಗೊತ್ತಿರಬೇಕಷ್ಟೆ.

'ಆಕಾಶ ಸೇರಿದರೆ ಅಲ್ಲಿ ಹೊಂಡದ ನೀರು; ತೀರ್ಥ, ಬಾವಿಯ ನೀರು,
ಕಡಲುಪ್ಪು ನೀರು, ಚರಂಡಿಯಲ್ಲಿ ಕೊಳೆಯುವ ನೀರು
ಎಲ್ಲ ಒಂದಾಗುವುದು;
ಜಾತಿ ಎಲ್ಲಿದೆ ಹೇಳು? ಇಲ್ಲಿ ಮಣ್ಣಲ್ಲಿ ನೆಟ್ಟಾಗ'

ಈ ಹಂತದಲ್ಲಿ ಕವಿತೆ ಕಾಣಿಸುವ ನೀರು ಮತ್ತದರ ಸ್ವರೂಪವೇ ಬೇರೆ. ಉಪನಿಷತ್ತಿನ ಸಣ್ಣ ಉದಾಹರಣೆಯ ಮೂಲಕ ಆರಂಭವಾದ ಕವಿತೆ ತನ್ನ ಗಮ್ಯತೆಯಲ್ಲಿ ಗುಡಿ, ಗಹ್ವರಗಳನ್ನು ಹಾದು ಸಮುದ್ರವನ್ನೂ ಕಾಣಿಸಿ ಕರೆದುಕೊಂಡು ಹೋದ ಸ್ಥಳವೇ ಬೇರೆ. ಪರ್ಜನ್ಯ ಸೂಕ್ತದ ಸಣ್ಣ ಪ್ರಕರಣವೊಂದನ್ನು ಕವಿತೆಯಾಗಿಸಿರುವ ರೀತಿಯೇ ಅದ್ಭುತವಾದುದು. ತನ್ನ ಪಾಡಿಗೆ ತಾನು ಶ್ರೇಣೀಕರಣವನ್ನು ಉಡಾಯಿಸಿ ಸಕಲರನ್ನೂ ಸನ್ಮಾನಿಸುವ ಮತ್ತು ಆ ಎತ್ತರವು ಎಲ್ಲರಿಗೂ ನಿಲುಕಲೆಂದು ಭಾವಿಸುವುದೂ ಕವಿತೆಯ ಆತ್ಮವಾಗಿರುವುದು ಓದುಗನಿಗೆ ತಕ್ಷಣಕ್ಕೇ ನಿಲುಕುವುದೇ ಈ ಕವಿತೆಯ ಹೆಚ್ಚುಗಾರಿಕೆಯಾಗಿದೆ. ಅಡಿಗರ ಉಳಿದ ಕವಿತೆಗಳ ಪ್ರತಿಮೆ ಮತ್ತು ಸಂಕೇತಗಳ ರೂಢಿ ಸಾಲುಗಳು ಇಲ್ಲಿ ಇರದಿದ್ದರೂ ಒಟ್ಟೂ ಅಡಿಗರು ಧ್ಯಾನಿಸಿದ್ದ ಜಗತ್ತಿನ ದರ್ಶನವಾಗುತ್ತದೆ. ಮತ್ತು ಅದರ ಸರಳ ಮತ್ತು ನೇರ ನಿರೂಪಣೆ ಕೂಡ ಸಾಮಾನ್ಯ ಓದುಗನಲ್ಲೂ ಹೊಸ ಹೊಳಹೊಂದನ್ನು ನೀಡಲು ಕಾರಣವಾಗುತ್ತದೆ. ಅಡಿಗರ ಕವಿತೆಗಳ ಓದು ನನ್ನನ್ನೂ ನನ್ನ ಕವಿತೆಯ ಕರ್ಮವನ್ನೂ ಸಾಕಷ್ಟು ಒಳಗೊಂಡಿದೆಯೆಂಬ ಹಮ್ಮು ಮತ್ತು ಆ ಕಾರಣಕ್ಕೇ ಪರಂಪರೆಯನ್ನೆಂದೂ ಧ್ಯಾನಿಸದ ನನ್ನ ಓರಗೆಯ ಕವಿಗಳ ಕುಚೋದ್ಯವನ್ನೂ ಒಟ್ಟಿಗೇ ನೆನೆಯುತ್ತ ಈ ಲೇಖನವನ್ನು ಮುಗಿಸುತ್ತಿದ್ದೇನೆ.



# ಅಡಿಗರ ಜೀವನದ ಪ್ರಮುಖ ಘಟನೆಗಳು

ಜನನ : 18.2.1918 (ಕುಂದಾಪುರ ತಾಲೂಕಿನ ಮೊಗೇರಿಯಲ್ಲಿ)

ವಿದ್ಯಾಭ್ಯಾಸ : ಬಿ.ಎ. ಆನರ್ಸ್ (ಇಂಗ್ಲಿಷ್) ಮೈಸೂರು ವಿಶ್ವವಿದ್ಯಾಲಯ, 1942
ಎಂ.ಎ. (ಇಂಗ್ಲಿಷ್) ನಾಗಪುರ ವಿಶ್ವವಿದ್ಯಾಲಯ, 1952

ವಿವಾಹ : 8.12.1944 (ಶ್ರೀಮತಿ ಲಲಿತ)

ಅಧ್ಯಾಪಕ ವೃತ್ತಿ: ಹೈಸ್ಕೂಲು (ಎರಡು ವರ್ಷ)
ಶಾರದಾವಿಲಾಸ ಕಾಲೇಜು, ಮೈಸೂರು (6 ವರ್ಷ)
ಕೆನರಾ ಕಾಲೇಜು, ಕುಮಟಾ ಇಂಗ್ಲಿಷ್ ಉಪನ್ಯಾಸಕ.
ಸೇಂಟ್ ಫಿಲೋಮಿನಾ ಕಾಲೇಜು, ಮೈಸೂರು (1954-64). ಇಂಗ್ಲಿಷ್ ರೀಡರ್ (ಹತ್ತು ವರ್ಷ)
1962ರಲ್ಲಿ 'ಸಾಕ್ಷಿ' ಪತ್ರಿಕೆ ಆರಂಭ.
ಲಾಲ್‌ಬಹದ್ದೂರ್ ಕಾಲೇಜು, ಸಾಗರ, ಪೂರ್ಣಪ್ರಜ್ಞ ಕಾಲೇಜು, ಉಡುಪಿ.
(ಪ್ರೊಫೆಸರ್ ಮತ್ತು ಪ್ರಿನ್ಸಿಪಾಲ್ ಆಗಿ ಏಳು ವರ್ಷ)
ನ್ಯಾಷನಲ್ ಬುಕ್ ಟ್ರಸ್ಟ್, ದೆಹಲಿ, (ಡೆಪ್ಯುಟಿ ಡೈರೆಕ್ಟರ್-ಸಂಪಾದಕೀಯ ಆರು ತಿಂಗಳು; ಜನವರಿ 1972ರಿಂದ ಜೂನ್ 1972)
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್, ಸಿಮ್ಲಾ ವಿಸಿಟಿಂಗ್ ಫೆಲೋ ಜೂನ್ 1972 ರಿಂದ ಜೂನ್ 1975 - ಮೂರು ವರ್ಷ

1974 : ಮೊದಲ ಬಾರಿಗೆ ಅಮೆರಿಕಾ ಪ್ರವಾಸ.

1982 : ವಿಶ್ವಕವಿ ಸಮ್ಮೇಳನದಲ್ಲಿ ಭಾಗವಹಿಸಲು ಪ್ಯಾರಿಸ್, ಯುಗೋಸ್ಲಾವಿಯಾಗಳಿಗೆ ಭೇಟಿ.

1986 : ಎರಡನೇ ಬಾರಿ ಅಮೆರಿಕಾ ಪ್ರವಾಸ.

1986 : ಲಕ್ವ (ಪಾರ್ಶ್ವವಾಯು), ಭಾಗಶಃ ಚೇತರಿಕೆ.

ಮರಣ : ~~8.12.1992~~ 4-11-92

# ಅಡಿಗರ ಕೃತಿಗಳು

**ಕಾವ್ಯ**

ಭಾವತರಂಗ : 1946
ಕಟ್ಟುವೆವು ನಾವು : 1948
ನಡೆದುಬಂದ ದಾರಿ : 1952
ಚಂಡೆಮದ್ದಳೆ : 1954
ಭೂಮಿಗೀತ : 1959
ವರ್ಧಮಾನ : 1972
ಇದನ್ನು ಬಯಸಿರಲಿಲ್ಲ : 1975
ಮೂಲಕ ಮಹಾಶಯರು : 1980
ಬತ್ತಲಾಗದ ಗಂಗೆ : 1983
ಚಿಂತಾಮಣಿಯಲ್ಲಿ ಕಂಡ ಮುಖ : 1987
ಸುವರ್ಣ ಪುತ್ಥಳಿ : 1990
ಬಾ ಇತ್ತ ಇತ್ತ : 1993

**ಆಯ್ದ ಕವನ ಸಂಗ್ರಹಗಳು**

ಅಡಿಗರ ಆಯ್ದ ಕವನಗಳು : 1968
ಆರೋಹಣ : 1978

**ಸಮಗ್ರ ಸಂಕಲನಗಳು**

ಸಮಗ್ರ ಕಾವ್ಯ : 1976
ಸಂಪೂರ್ಣ ಕಾವ್ಯ : 2000

**ಕಾದಂಬರಿಗಳು**

ಆಕಾಶದೀಪ : 1952
ಅನಾಥೆ : 1958

**ಕಥಾಸಂಕಲನ**

ಹುಲಿರಾಯ ಮತ್ತು ಇತರ ಕಥೆಗಳು : 1990

**ವಿಚಾರ ವಿಮರ್ಶೆ**

ಮಣ್ಣಿನ ವಾಸನೆ : 1966
ವಿಚಾರಪಥ : 1972
ಕನ್ನಡದ ಅಭಿಮಾನ : 1972
ನಮ್ಮ ಶಿಕ್ಷಣ ಕ್ಷೇತ್ರ : 1972
ಲೇಖನಗಳು ಮತ್ತು ಮುನ್ನುಡಿಗಳು : 1972

**ಸಮಗ್ರ**

ಸಮಗ್ರ ಗದ್ಯ : 1977
ಸಾಕ್ಷಿ ಪ್ರಜ್ಞೆ : 2008

**ಅನುವಾದ ಸಾಹಿತ್ಯ**

ಸುವರ್ಣ ಕೀಟ : 1948
ರೈತರ ಹುಡುಗಿ : 1948
ಜನತೆಯ ಶತ್ರು : 1949
ಭೂಗರ್ಭ ಯಾತ್ರೆ : 1950
ಹುಲ್ಲಿನ ದಳಗಳು : 1966
ಮುಕ್ತಾಫಲ : 1965
ಇತಿಹಾಸಚಕ್ರ : 1972
ಬನದ ಮಕ್ಕಳು : 1975
ಟೈಪೀ : 1979
ನಾಲ್ಕು ಮಂದಿ ಗೆಳೆಯರ ಕಥೆ : 1979
ಕೆಂಪು ಅಕ್ಷರ : 1984
ಕಾವ್ಯ ಜಗತ್ತು : 1986
ಆಯ್ದ ಪ್ರಬಂಧಗಳು - 1 : 1981
ಆಯ್ದ ಪ್ರಬಂಧಗಳು - 2 : 1983
ಕೆಸರಿನಿಂದ ಶಿಖರಕ್ಕೆ

**ಆತ್ಮಕಥನ**

ನೆನಪಿನ ಗಣಿಯಿಂದ : 1999

**ಸಮ್ಮಿಶ್ರ**

ಆರೂಡು (ಆರಂಭದ ರಚನೆಗಳು) : 1993



## ಅಡಿಗರಿಗೆ ಸಂದ ಪ್ರಶಸ್ತಿ - ಗೌರವಗಳು

1941 : 'ಒಳತೋಟಿ' ಕವನಕ್ಕೆ ಬಿ.ಎಂ.ಶ್ರೀ ಪ್ರಶಸ್ತಿ.
1998 : 'ಸಂವೇದನೆ' ಗೌರವ ಗ್ರಂಥ ಅರ್ಪಣೆ
1974 : ರಾಜ್ಯಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ
1975 : 'ವರ್ಧಮಾನ' ಕವನ ಸಂಗ್ರಹಕ್ಕೆ ಕೇಂದ್ರ ಅಕಾಡೆಮಿ ಪ್ರಶಸ್ತಿ.
1979 : ಕೇರಳದ ಕುಮಾರನ್ ಆಸಾನ್ ಪ್ರಶಸ್ತಿ.
1979 : ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ
1900 : ವರ್ಧಮಾನ ಪ್ರಶಸ್ತಿ
1989 : ಮಧ್ಯಪ್ರದೇಶದ ಕಬೀರ್ ಸಮ್ಮಾನ್ ಪ್ರಶಸ್ತಿ
1988 : ಡಾಕ್ಟರೇಟ್ ಲಿಟರೇಚರ್ ಪ್ರಶಸ್ತಿ
1993 : ಪಂಪ ಪ್ರಶಸ್ತಿ

## ಅಡಿಗರ ಕಾವ್ಯವನ್ನು ಕುರಿತ ಕೃತಿಗಳು

1. ಸಂಸ್ಕೃತಿ ಮತ್ತು ಅಡಿಗ – ಡಾ॥ಯು.ಆರ್.ಅನಂತಮೂರ್ತಿ
2. ಕಾವ್ಯ ಶೋಧನ: ಸಂ. – ಡಾ॥ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ
3. ಅನನ್ಯ: ಸಂ. – ಡಾ॥ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ
4. ಅಡಿಗರ ಕಾವ್ಯ – ಡಾ॥ಸುಮತೀಂದ್ರ ನಾಡಿಗ
5. ಅನ್ವೇಷಣದ ಅಡಿಗರು:ಸಂ. – ದೇಶಪಾಂಡೆ ಸುಬ್ಬರಾಯ
6. ಶಬ್ದಮಾರ್ಗ – ಡಾ॥ಶ್ರೀರಾಮ ಭಟ್ಟ
7. ಗೋಪಾಲಕೃಷ್ಣ ಅಡಿಗ – ಬಿ.ವಿ.ಕೆದಿಲಾಯ
8. ಅಡಿಗರ ನವ್ಯ ಕಾವ್ಯ – ಡಾ.ಕೆ.ಎಸ್.ಕೆಳಗಿನ ಮನಿ
9. ಅಡಿಗರ ಕಾವ್ಯದಲ್ಲಿ ವಾಸ್ತವತೆ – ಡಾ.ಅಣ್ಣಮ್ಮ
10. ಭೂಮಿಗೀತ ಕಾವ್ಯ ಪ್ರವೇಶ – ಪ್ರೊ.ರಾಮದಾಸ್
11. ಗೋಪಾಲಕೃಷ್ಣ ಅಡಿಗ – ಬಾಲಸುಬ್ರಹ್ಮಣ್ಯ ಕಂಜರ್ಪಣೆ



